# ಗಗನ ಕುಸುಮ

ಮಲ್ಲಿಕಾ

ಕ್ಷಣಶಃ ಕಣಶಶ್ಚೈವ
ವಿದ್ಯಾಮರ್ಥಂ ಚ ಸಾಧಯೇತ್
ಕ್ಷಣತ್ಯಾಗೇ ಕುತೋ ವಿದ್ಯಾ
ಕಣತ್ಯಾಗೇ ಕುತಃ ಸುಖಂ ?

ಗಗನ ಕುಸುಮ–ಕವನ ಸಂಕಲನದ ಲೇಖಕರು ಶ್ರೀಮತಿ ಮಲ್ಲಿಕಾ

ಪ್ರಕಾಶಕರು :
ಲಕ್ಷ್ಮೀ ಪ್ರಕಾಶನ, ೭, ಲ್ಯಾಂಗ್ ಫೋರ್ಡ್ ರೋಡ್, ಬೆಂಗಳೂರು-೨೫.

ಪ್ರಥಮ ಮುದ್ರಣ–೧೯೬೪
ದ್ವಿತೀಯ ಮುದ್ರಣ–೧೯೬೫

ಬೆಲೆ : ಹತ್ತು ರೂ.

# ವಿವರಣೆ

# ಗಗನ ಕುಸುಮ

ಎನಿತು ಕನಸು ಕಂಡೆನೋ ದೇವ !
ಭವದೀಯ ಗುಡಿಗೋಪುರವಂ

ಉತ್ತುಂಗಕ್ಕೇರ್ವಡಿಸುವಾ
ಹುಮ್ಮಿನಲಿ ನಂಬಿ ನಿನ್ನನೇ !

ತವ ದಯದಿಂ ಜೀವನೋತ್ಸವ
ಮಘಮಘಿಸುವುದೆಂಬ ಭಾವ

ಮನದುಂಬಿ ಬಾಳ್ತುಂಬುವಾ
ಆಸೆಯಿಂ ತಪವನೋಂತೆನ್ನೈ !

ಧರ್ಮದಿಂ ನೇಮದಿಂ ಭಂಗದಿಂ
ಕರ್ಮಕೌಶಲಂ ಕೈಗೂಡಿಸಿದೊಡಂ

ಆಶಾ ಪಾಶಗಳ ಅತಿಕೆಳೆತನಂ
ಜಸಕ್ಕೆರವೆನೆ ಕೊಯ್ದುದು ಸಿಡುಗೂರಳಂ !

ಭವ್ಯ ಭವಿತವ್ಯದ ಚಿಂತನೆಯೆಮ
ಮುರಿದು ಬಿದ್ದು ಮಣ್ಣಿನ ಹುಡಿಯಲ್ಲಿ

ಬೆರೆತು ನನಸಾಗದ ಬರಿಗನಸೊಳ್
ಭವ್ಯ ಭವಿತವ್ಯಂ ಗಗನ ಕುಸುಮ ಕಣಾ !

—:o:—

# ಮನಸ್ಸಿಗೆ

ಏನೆಂದೊರೆದರೆಂಬುದಂ
ಗಮನಿಸಯ್ಯಾ ;

ಆರೆಂದರೆಂಬುದಂ
ಕಡೆಗಣಿಸಯ್ಯಾ ;

# ಶ್ರೀ ಶಂಭೋ ಮಹಾದೇವ

ಜನ್ಮ ಜನ್ಮಗಳೆತ್ತಿ ಬಂದೆ
ನಿನ್ನ ದರ್ಶನ ಬಯಸಿ ತಂದೆ
ಎಲ್ಲಿರುವೆ ಎಂತರಸಲಿ ನಿನ್ನ
ದಯೆದೋರಿ ಬಾರೆನ್ನ ಚಿನ್ನ
ಶ್ರೀ ಶಂಭೋ ಮಹಾದೇವ !

ಹಗಲಿರುಳು ಅರಸಿದರು ಇಲ್ಲ–
ವೀ ಧರೆಯಲಿ ಸತ್ಯಾರ್ಥ ನಿಧಿ
ಮತಿಗೆಟ್ಟವರನುದ್ಧರಿಸಲು
ಕರುಣದಿಂ ಧರೆಗಿಳಿದು ಬಾರೈ
ಶ್ರೀ. ಶಂಭೋ ಮಹಾದೇವ !

ಕಂಡು ಕಾಣದಂತಿರೆ ನೀನು
ಎನಿತು ಕಾಡಿ ಬೇಡಲಿ ನಿನ್ನ
ದೀನ ಮೊರೆಯು ಕೇಳದೆ ಎನ್ನ
ಏಕಿಂತಿನಿತು ಉದಾಸೀನ
ಶ್ರೀ ಶಂಭೋ ಮಹಾದೇವ !

ಭವ ಬಂಧನದಲಿ ಸೆರೆಸಿಲ್ಕಿ
ಸೆರೆಗೊಡ್ಡಿ ಬೇಡುವೆನೊ ಅಳ್ಕಿ
ಸಾಗೈದಪರಾಧವ ಕ್ಷಮಿಸಿ
ಒಲಿದು ಬಾರೈ ಎನ್ನ ಹರಸಿ
ಶ್ರೀ ಶಂಭೋ ಮಹಾದೇವ!

ಯಮ ಪುರಿಯ ಹಾದಿ ಹಿಡಿದಾನು
ಬಲು ಬಳಲಿದೆನಯ್ಯ ಮುರಹರನೆ
ಬಂದೆನ್ನ ಉದ್ಧರಿಸಿ ಬನ್ನ–
ಭಂಗವ ಕಳೆಯೈ ಮನದನ್ನ
ಶ್ರೀ ಶಂಭೋ ಮಹಾದೇವ !

# ಪ್ರತೀಕ್ಷೆ

ನಿಶಾರಾಣಿ ತಾಂ ರುದ್ರಕಾಳಿ ವೇಶದಿಂ
ನೆರೆ ಮೆರೆದು ವಿಜೃಂಭಿಸಿ
ನಿರ್ಗಮಿಸಿದಾ ಬಳಿಕಂ
ಸುರ ಸುಂದರವೇಶಿ ಉಷೆ ದೂರಳೇಂ ಜಗಕೆ ?
ಒಡನೊಡನೆ ಮೂಡಣದಂಚಿನ ನೀಲ ನೀಲಿಯಲಿ
ಮೆಲುಮೆಲ್ಲನೆ ತುಳುಕಿತಲಾ ಮುಂಬೆಳಕು
ಜೀವನ ಜ್ಯೋತ್ಸ್ನೆಯು ಕುರುಹಾಗಿ
ಮೇಣ್ ಸಂಧಿಕಾಲದ ನಿತ್ಯನೋಂಪಿಯಾಗಿ !

ಮತ್ತಾಗಳ್ ಮುಂಬಕ್ಕಿಗಳೆದ್ದು ರೆಂಕೆಯಂ ಬಡಿದು
ಪಟಪಟಿಸಿ ಕಿರುದನಿಯ ಕೊರಳಗಾನಮಂ
ಬಿತ್ತರಿಸಿದುವು ಸುಪ್ರಭಾತದ ಆಮೋದದಲಿ.

ಮುಂಬೆಳಕು ಮುಖಮಂ ಮುದ್ದಿಡೆ
ಆನೆದ್ದು ಮುಂಬಾಗಿಲಂ ತೆರೆದು ದಿಟ್ಟಿಯಂ
ದೂರ ಹಾದಿಯೊಳ್ ನೆಟ್ಟು ನೋನೋಡುತ
ನಿಂದೆನ್ನೈ ಭಾವೋನ್ಮತ್ತ ಭಂಗಿಯಲಿ.
ಕ್ಷಣಕ್ಷಣಗಳ್ ಮಿಂಚಿ ಸಂದುವು ;
ಗಳಿಗೆ ಗಳಿಗೆಗಳ್ ಬಿಂಕದಿಂ ಉರುಳ್ದುವು ;
ಎನ್ನ ಗಮನಕ್ಕೆ ಬಾರದವೋಲ್.
ಪಕ್ಷಿ ಗೊರಳ ಇನಿಗಾನ ಮತ್ತೆ ಮತ್ತೆ ಮೇಣ್ಮತ್ತೆ
ಪೊದಳ್ದುದೆಲ್ಲೆಡೆಯುಂ ಶ್ರುತಿಬದ್ಧಮಾಗಿ.
ಕೋಗಿಲೆಯ ಸ್ವರರಾಗ ಕುಹೂ ಕುಹೂ ಕುಹೂ
ಎಂದೊರೆಯೆ ಕರ್ಣಪಟಲಗಳಿಂಗೆ
ರಾಗಾರುಣತಾನ ಮಿಡಿದುದು
ಹೃದಯ ತಂತುಗಳಲಿ ಪ್ಯೈಜುಂ ಎನಿಸುವವೋಲ್ !

# ಪ್ರತೀಕ್ಷೆ

ಪುನಃ ಪುನಃ ಮೊಳಗುತಾ ಕೋಗಿಲೆಯು ಮೃದು
ಮಧುರ ಕಂಠ ರಾಗಸುಧಾರಸ
ವಿರಹದೆಡೆಯು ಬಡಬಾಗ್ನಿಗೆ ನೆಯ್ಯ ಸುರಿಯುವಂತೆ !
ಕಡು ಚಿಂತೆಯು ಪಾಂಬಿನದಂಷ್ಟ್ರದುಗ್ರ ಕರುಣೆಯಿಂದೆ.
ಬಳಲ್ದೀ ಜೀವಾತ್ಮನ ಮೊರೆಯಂ ಕೇಳ್ವರಾರು ?
ಕಾದು ಕಾದು ಬೇಸತ್ತು
ಕಂಗಳಲಿ ಕಂಬನಿ ಪರಿದುದು ಧಾರೆಧಾರೆಯುಪ್ಪಿ.
ಪ್ರಾತಃಸಮಯಂ ಸದ್ದಿಲ್ಲದ ಶಾಂತಿಯಲಿ ಮಿಂದಿರೆ
ಎಲ್ಲೆಡೆ ನಿಶ್ಶಬ್ದ-ನೀರವತಾಮೋದದ ಪರಿವೇಶಿ !
ಜಕ್ಕವಕ್ಕಿ ಜಕ್ಕಿಣಿಯೊಲ್ ರಾಗಮಾಲೆಯಂ ಪರಿಸುತಿರೆ
ಲೋಕಾಲೋಕಮಂ ಬೆಳಗಿತು ಮುಂಬೆಳಕಿನ ನಾಲೆ.
ನೀಲ ಸುನೀಲ ಛತ್ರಿಯಲಿ ಬಾಲನೇಸರು ಮೆಲ್ಲನೆ
ಮೈದೋರಿ ಮೇಲೇರಿದೊಡಂ ಹೃನ್ಮಂದಿರದ ನಿಡುಗತ್ತಲು
ಹರಿದುದಿಲ್ಲ ಮನದಿನಿಯಂ ಪುನರಾಗಮಿಸದೆ.
ನೋನೋಡಿ ದೃಷ್ಟಿ ಸೋಲ್ದೊಡಂ ದಣಿಯದಾ
ಕಣ್ಣವೆಗಳ್ ಗುಡಿಸುತಿವೆ ಹಾದಿಯ ಧೂಳಿಯಂ.
ಮತ್ತಾ ದರುಗೆಲೆ ಕಸಕಡ್ಡಿಗಳಂ.
ಕಂಗಳಂಚಿನಲಿ ಪೊಳೆಪೊಳೆವ ನಿಡುಗಂಬನಿಗಳ್
ತೊಳೆಯಲುಜ್ಜುಗಿಸಿವೆ ಧೂಳಿಯೊತ್ತಿದ್ದ ಪಾದಪದ್ಮಂಗಳಂ

ಓಹೋ, ಪೆರ್ಮುಗಿಲ ದಿಣ್ಣೆಯನೇರಿದ ಪೊನ್ನೇಸರ್
ಘೋಘೋಸುತ ಕೋಟ್ಯೆಸಲ್ ನೆಟ್ಟು ನಿಟ್ಟಾಲಿಗಳಂ
ಜಗವೆಲ್ಲ ಎದ್ದು ನಿಚ್ಚ ಜೀವನ ಜಂಜಡದಲಿ
ಹೋರಾಡುತಿದೆ ನೋವು-ನಲಿವುಗಳಂ
ಮೈದುಂಬಿ ; ಮನದುಂಬಿ.

# ಪ್ರತೀಕ್ಷೆ

— ೨ —

ತಂಗಾಳಿಯಾಟದಿಂ ಕೆದರಿದ ಕೃಷ್ಣವರ್ಣದ ಅಲಕರಾಶಿ
ಚದರಿ ಹರಡಿತು ಮುಖಬಿಂಬದ ಸುತ್ತಲ್,
ಕಾಳಗಪ್ಪಿನ ತೆರೆಯು ಹೋಲಿ !
ಸಮಯಮುರುಳಿದನಿತು ತನುಮನಂ ಬಾಡಿ ಬಳಲ್ದು
ಹೃತ್ ಕುಂಡಲಿನಿಯೊಳ್ ನೋನೋಯ್ದುದು
ಪ್ರಾಣವಾಹಿನಿ ತಾಂ
ಚಿಂತೆಯು ಬೆಂಕೆಯುರಿ ಸುಟ್ಟು ಕಟ್ಟುರಿಯಾಗಿ.
ಬಂದಾನೊ ಬಾರನೊ ಎಂದೆಂಬಾಶಂಕೆ ಕೊರೆಯುತಿರಲ್
ನರನಾಡಿಗಳಂ, ಏವೇಳ್ವೆನೋ ಒಡಲ ತಳಮಳಮಂ.

ಓವೋ, ಎನಿತೊಂದು ದಿನಮಾನಗಳ್,
ವಾರಗಳ್ ಮತ್ತಮಾ ಮಾಸಂಗಳ್ ಪುಟಿಪುಟಿದು
ಸಂದುವೋ, ಮಾಮರಗಳೀಗಳ್
ಪೂತು ಮೈಸಿಂಗರಿಸಿ ನಳನಳಿಸಿದುವೋ,
ಇನ್ನೇಗಳ್ ಸಂಪಗೆ ಮರಗಳ್ ಪೂಸೊಗ್ಗುಗಳಿಂದೆ
ಘಮಘಮಿಸಿದುವೋ ತಿಳಿಯಲಿಲ್ಲಂ ;
ಸಂದುದಾ ಕಾಲಂ ಕಾಲಾದಿಪನ ಮೈಮೆಯಲಿ.

ದಿನದಿನಂ ಕೋಳಿಗಳ್ ಕೂಗಿದುವು,
ನವಿಲ್ ಕೇಗಿದುದು ; ಮತ್ತಮಾ ಕೋಗಿಲೆ
ಕೂವಿಟ್ಟುದುದು ಕುಹು ಕುಹೂ ಕುಹೂ ಎನುತಲಿ ;
ನೊಂದೆದೆಯು ದುಳ್ಳುರಿಗೆ
ಎಣ್ಣೆಯನೊರೆದು ಪ್ರೋಜ್ವಲಗೊಳಿಪಂತೆ !
ಏನಿರ್ದೊಡೇಂ ಎನ್ನೊಡೆಯಾ !
ಹೃತ್ ದೇಗುಲದೊಳ್ ನೀನಿಲ್ಲದಿರೆ ಎಲ್ಲಂ
ಬರಿದೋ ಬರಿದು....
ನಿನ್ನ ಹಾದಿಯೊಳ್ ನಟ್ಟ ಕಣ್ಣಾಗಿ
ಮೈಯೆಲ್ಲ ಮನಸ್ಸಾಗಿ.

## ಪ್ರತೀಕ್ಷೆ

ನಿನ್ನ ಯೋಚಿಸಿ, ಧ್ಯಾನಿಸಿ, ಚಿಂತಿಸಿ
ಕಡು ನೋವಿನಾಗರವಾಗಿ ಬಾಡಿಬತ್ತಿದುದು
ಕಣ್ಮನಗಳ ಛಂದಶ್ಶರೀರಂ !
ಹೃತ್ ಕರಂಪದ ತಂತು ತಂತುಗಳ್ ತಳಮಳಿಸಿ
ನೊಂದು ನೋಯುತ ದಿಕ್ಕೆಟ್ಟು
ಶೋಕರಸಮಂ ಪ್ರಸರಿಸುತಿರೆ ದೇಹದಾದ್ಯಂತಂ
ಮನಂ ತೊಟ್ಟು ಕಳೆದ ಮಂದಾರ ಪುಷ್ಪದೊಲ್ ಕಣಾ !
ಹಾ, ವರ್ಣನಾತೀತ ನೋವಿನ ಕ್ರೀಡೆ !!
ಅಲ್ತು, ಅಲ್ತಲ್ತು ;
ನೋವಿನೊಳ್ ಮೂಡುವ ರಸಜ್ಞತಾಭಾವ,
ರಸಜ್ಞತಾಭಾವದೊಳ್ ನಲಿವು-ನೋವು ಒಂದಾಗಿ
ನಿನ್ನನೇ ಬಯಸುತಿವೆ ತಾನೇ ತಾನಾಗಿ !

—೩—

ವರುಷವೇಸು ಸಂದುವೊ ಹರುಷ
ದೂರ್ಬೈಸಿ, ನೋಳ್ಪಕಣ್ ನೋನೋಡಿ ನೋಯುತಿರೆ
ತನುಮನಂ ಸೋಲ್ದು ಬಳಲ್ದು ಬೆಂಡಾದುವು
ನಿರೀಕ್ಷೆಯಾ ನಿಡು ನೋವಿನಲಿ,
ಆದೊಡಂ ಮುಗಿಯದೆಂದೂ ಜೀವನ ಪೀಡೆ-
ಘೋರವಿಾ ಜೀವನ ಪೀಡೆ !
ದಿನದಿನಂ ಎಣೆಯಿಲ್ಲದಿನಿಯನ ಪ್ರತೀಕ್ಷೆಯಲಿ.
ಯೋಚನೆಯ ಮಂಥನಂ ಮನದಳೆಯಲಿ
ಧುಮುಧುಮಿಸೆ ಕಳೆಯಲಾಗದಾ ನೋವಿನ ಕ್ರೀಡೆ !
ಮನಕರಗಿ ತನುಕರಗಿ ಜೀವನ ಜೀವಮಾನವೇ
ಕರಗುತಿದೆ ವಸಂತ ಪ್ರಭುವಿನೊಡ್ಡೋಲಗಂ
ತಾಂ ವಿಜೃಂಭಿಸಿ ಹೋಹಂದದಲಿ.
ಆನಿದಂ ತಡೆಯಬಲ್ಲೆನೆ ?

# ಪ್ರತೀಕ್ಷೆ

ಓ ದೇವ ! ನಾಂ ಕರಗುತಿಹೆ ಇದ್ದಲ್ಲೇ
ನೀಂ ನಿತ್ಯೋತ್ಸವದಿಂ ಬೆಳಗುತಿಹೆ ಗೆಲ್ದು !
ಏಕಿಂತು ಕಾಡಿಸುವೆ ? ನೋಯಿಸುವೆ ?
ಎನ್ನೊಳಗೇಂ ನಿನ್ನಯ ಚಿನ್ನಾಟ ?
ಸಾಲ್ಗುಮೀ ಪ್ರಾಣ ಸಂಕಟದ ಕ್ರೀಡೆ.
ತಾಳಲಾರೆನೋ ಬಾಳಲಾರೆನೋ ಸ್ವಾಮಿ !
ನಡೆನಡೆದು ನಿನ್ನ ಪಾದಗಳ್ ನೋಯದೊಲ್
ಹಾಸುವೆನೆನ್ನೀ ನಾಲಗೆಯಂ ನಿನ್ನ ಹಾದಿಗೆ
ಬಾರಯ್ಯ ಮಮ ಪ್ರಭುವೆ !

ನಾನೊಂದು ದುಃಖರಸ ತುಂಬಿದ ಕಾದಂಬಿನಿ
ಅಥವಾ ಕರ್ಪುರ್ ಮೈಯೊಡೆದ ಛಾಯೆ ;
ಇಂತೆಂದರೆ ಸಾಲ್ಗುಮೆ ಎನ್ನ ಪರಿಚಯಂ ?
ಜಗದ್ದಿತಿಹಾಸ ಪುಟಗಳ ಒಂದಕ್ಕರ–
ಒಂದೇ ಒಂದಕ್ಕರದ ಬೆಲೆಯಿಲ್ಲಂ ದೇವ !
ಬಿಡು, ಆದೊಡೇಂ ಕೀಳಲ್ಲ....
ಮಿಂಚುಂಬಳದ ಮಿಣುಕು ಬೆಳಕು ಕೀಳೇಂ ?
ಅವುಗಳ ಮೋಹಕ ಕುಟುಂಬ
ಕಿರು ದೀವಳಿಯಲ್ತೆ ಕೂಡಿದೆಡೆಯೊಳ್ ?

ನೀನೆನ್ನ ಪ್ರಾಣಮಯ ; ನಾನಿನ್ನ ಚಿರದಾಸಿ ;
ನೀ ನಿಸ್ಸೀಮ ! ನಾನೊಂದು ಕ್ರಿಮಿ
ನೀ ಸ್ವಚ್ಛಂದ ! ಮೃದು ಮಧುರ ರಾಗ !
ನಾಂ ಗತಿವಿಹೀನ ನಾರಿ ; ಅಜ್ಞೆ . ದಾಸಿ.
ನೀಂ ಧೀರ... ಜೀವ ಮಂದಾರ. ನಾಂ ಜಡದೇಹಿ.
ಆದೊಡೇಂ, ಮಾನಸ ನಿವೇದನೆಗೆ ಅರ್ಥವಿಲ್ಲಮೇನ್ಸ್ರ ?
ಪ್ರಭುವೇ ! ನಿನ್ನ ಛೇಟಿಗಾಕರಿಸ ಕ್ರೀಡೆ–
ಮುಗಿಯದಾ ಕಡುನೋವಿನ ಕ್ರೀಡೆ

## ಪ್ರತೀಕ್ಷೆ

ಸಾಲ್ಗಂ—ಸಾಲ್ಗಂ
ನೊಂದೆನ್ನ ಸೊನ್ನೆ ಬಾಳಿಗೆ ಬೆಳಕಾಗಿ ನೀ ಬರೆ
ಏಂ ಸೊಗಸು ? ಏಂ ಬಿಗುಪು ?
ಆಗಳಾಂ ಉನ್ಮತ್ತರಾಣಿ !
ದೇವಮಾನವನ ದೇವ ಮಾನಿನಿ ಕಣಾ !

ಇರುಳುರುಳಿ ಮುಂಬೆಳಗು ಮೂಡಿ ಪೊಳ್ತೇರ್ಪನ್ನೆಗಂ
ನೀ ಬಂದೇ ಬರುವೆಯೆಂದು ಕಾದೊಡೆ
ನೀನುದಯಿಸಿ ಬಂದುದು ಸೂರ್ಯದೇವನಾಗಿ !
ಹಗಲುರುಳಿ ಇರುಳುಗವಿಸುವನ್ನೆಗಂ ನೀ ಬರುವೆಯೆಂದು
ಪ್ರತೀಕ್ಷಿಸಿದೊಡೆ ನೀ ಬಂದೆ
ಮನಮೋಹನೀಯ ಚಂದಿರನಾಗಿ !
ಮೇಣ್ ನಡುವಗಲ ಸುಡು ಬಿಸಿಲಿನಲಿ ನೀ ಬಂದೆಯ್ದೆ
ಎನ್ನಯ ಜೀವನದ ಮರೀಚಿಕೆಯಾಗಿ !
ಹೇ, ದೇವಾದಿದೇವ ! ನೀನೆಲ್ಲೆ ಇರು ; ಎಂತಾದರಿರು ;
ನಿನಗಿದೊ ವಿನಮ್ರ ನಮನ ! ಮೇಣಿದೊ
ಸವಿನಯ ಪೂರ್ಣ ಆಮಂತ್ರಣಂ ಮತ್ತೆ ಮತ್ತೆ
ಮೇಣ್ಮತ್ತೆ ಕೈ ಮುಗಿದು ಬೇಡುವೆನ್ನೆ
ಓ ಎನ್ನ ದೊರೆಯೆ !
ಕಾದಿರುವೆನೆಂದೆಂದೂ ನೀ ಬಂದೇ ಬರುವೆಯೆಂದು !

—:o:—

## ಸುಖ

ಮಳಿಗೆಗಳಲಿ ವಸ್ತುವಸ್ತುಗಳ್
ದೊರೆವುದೈ ರೊಕ್ಕದ ಹೊಳೆ
ಹರಿಸಿದೊಡೆ; ಸುಖ ಎಂಬ ಸರಳ
ವಸ್ತು ಎಲ್ಲಿಯು ದೊರಕದು ಕೇಳ್
ಧನ್ಯನಂ ಅ[illegible]ದಿಕೆ ತನ್ನೊಳ್

# krakatoa

ಸೆ ಸಾವಿರದ ಎಂಟನೂರೆಂಭತ್ತಮೂರನೆ
ಇಸವಿಯೊಳ್ ಆಗಸ್ಟ್ ಇಪ್ಪತ್ತಾರು ಮತ್ತಮಾ
ಇಪ್ಪತ್ತೇಳರ ತೇದಿ ಕರಾಳದಿನಂ ಕಣಾ,
ದೂರ ಇಂಡೋನೇಶಿಯಾದಲ್ಲಿ ! ತೆಕ್ಕನೆಯೆ
ಅಗ್ನಿಯನುಗುಳಿ ಕುದಿವ ಕರ್ಬುನದ ಲಾವಾರಸ
ನೆರೆಹರಿಸಿ ಸಹಸ್ರ ಸಹಸ್ರ ಪ್ರಾಣಹಾನಿ, ನಗರಹಾನಿ,
ಗ್ರಾಮಹಾನಿ ಆಸ್ತಿ ಮನೆ ಮಠ ಹಾನಿಗೈದಾ
ಇತಿಹಾಸ ಪ್ರಸಿದ್ಧ ಅಗ್ನಿ ಪರ್ವತರಾಜ
krakatoa !

ಅಂದಿಂದಿಗೂ ಮರೆಯಲಾಗದ ನೆನೆಯಲಾಗದ
ಘೋರಾತಿಘೋರ ದುರಂತವೀ ರಾಕ್ಷಸೀಯ
ಕಡುಪಾತಕವೀ ಭೀಕರ ವಿಕೋಪವೀ ನಿಜ
ಪೌರುಷವೀ ಪ್ರಕಾಂಡದಿಂ ದುಃಖಿತರ ಅಶ್ರು
ಜನ್ಯ ಶಾಪದಾ ನೊಂದವರ ಬಿಸುಸುಯ್ಲನಾ
ತಾಪಾನುತಾಪದಾ ಸಂಕಟಂ ನಂದಿಸಲಿ
ನಿನ್ನೊಳಗದ ಪ್ರಚಂಡ ಕೋಪ ಬೆಂಕೆಯುಂ
ಎಂದುಮೆಂದಿಗೂ ಹೇ ಅಗ್ನಿ ಪರ್ವತರಾಜ
krakatoa !

—:o:—

# ಮೂರ್ಖಮತಿ

ಅಧಿಕಾರ ಸ್ಥಾನಕ್ಕೊದಗುವ
ಮಾನ್ಯತೆಯ ಪಾತ್ರರಂ
ತಮ್ಮದೇ ಮಹತ್ತೆಂಬುವ
ಮೂರ್ಖಮತಿಯ ಬಿತ್ತರಂ
ಅಧಿಕಾರವಳಿಯೆ ಗದಗದಿಸುವ
ಬಣ್ಣಗೆಟ್ಟು ಸೈಪಳಿದ ಚದ್ಧರಂ !

# ನಿರ್ಝರಿಣಿ

ಧುಮುಕುತಿದೆ! ಭೋರೆಂದು ಭೋರ್ಗರೆದು ಧುಮುಕುತಿದೆ!
ಪ್ರಪಾತಕೆ ಉನ್ಮತ್ತ ಉದ್ವೇಲ ನಿರ್ಝರಿಣಿ !
ಆವಕಾಲದ ನೋಂಪಿಯೊ ಇನ್ನಾವ ಶಕ್ತಿಯು
ಸಂಚಯುನವೊ ದಯೆದೋರಿ, ಜೀವಜಗತ್ ತಣ್ಪಿ
ನೆರೆಯ ನೀರುಂಡು, ಜೀವನೀಯ ದರ್ಶನದಿಂದೆ
ಪ್ರವೃತ್ತಿ ವೋದಂಬೆತ್ತುದೆನಲ್ ತಾನಾರ್ದು
ಗಿರಿಕಂದರಗಳ ಪ್ರತಿನಾದಿತಗೊಳಿಸಿ ವನ
ದೇಶವಂ ಇಬ್ಭಾಗಗೊಳಿಸಿ ಪರಿಪುಷ್ಟಿಯಾ
ಹುಮ್ಮಿನೊಳ್ ನೆಮ್ಮಿ ಲೋಕ ಕಲ್ಯಾಣವಂ ಕಾಣ್

ಧುಮುಕುತಿದೆ! ಭೋರೆಂದು ಭೋರ್ಗರೆದು ಧುಮುಕುತಿದೆ!
ಪ್ರಪಾತಕೆ ಉನ್ಮತ್ತ ಉದ್ವೇಲ ನಿರ್ಝರಿಣಿ !
ಮೊರೆದು ನೊರೆನೊರೆಯುಪ್ಪಿ ಫೇನಪುಂಜವನೊಟ್ಟಿ
ಬುರುಗನಿರ್ದೆಸೆಗಂ ಬೀಸಿವೀಸಿ ಮುನ್ನುಗ್ಗಿ
ಭೋರ್ಗರೆವ ಮಹಾಘೋಷದೋಂಕೃತಿಗೆ ತಾನೆ
ಮೆಚ್ಚಿ, ತನ್ನ ಕೃತಿಯುಂ ತಾಂ ನೆಚ್ಚುವ ಮಹಾ
ಸೃಷ್ಟಿಕರ್ತನವೊಲ್ ಸುಖಾನಂದದಿಂ ಮನವೆರ್ಚಿ
ದಿವ್ಯರಸಸಲಿಲೆಯಾಗಿ ಪರಿದಿದೆ ನಿರ್ಝರಿಣಿ
ಕಾಲನೊಳ್ ಎಣೆಯಿಲ್ಲದಾ ಸ್ಪರ್ಧೆಯುಂ ಹೂಡಿ !

ಧುಮುಕುತಿದೆ! ಭೋರೆಂದು ಭೋರ್ಗರೆದು ಧುಮುಕುತಿದೆ!
ಪ್ರಪಾತಕೆ ಉನ್ಮತ್ತ ಉದ್ವೇಲ ನಿರ್ಝರಿಣಿ !

# ದೇವ

ಗುಡಿಗಳಲ್ಲಿ ಬನಗಳಲ್ಲಿ
ನಾ ಅಲೆದಲೆದು ಪುಡುಪುಡುಕಿ
ಸೋತೆನ್ನೈ ಕಾಣದೆಲ್ಲಿಯುಃ
ನಿನ್ನಯ ರೂಪುರೇಷೆ ಕಣಾ !

ನನ್ನ ನಾನರಿವ ಮುನ್ನ
ಕಾಂಬೆನೆ ಗುಡಿಗೋಪುರದಲಿ
ಓ ದೇವ ನಿನ್ನಂ ? ಎನಿತು
ಪರಿಹಾಸವೀ ಪರಿಜ್ಞಾನ ?

ನರರಲಿ ನಾರಾಯಣನಂ
ಮೇಣ್ ಜೀವನೀಶಕ್ತಿಯಲಿ
ಮುಕ್ತಿಯಂ ಕಾಂಬ ಮತಿಯಣ
ಮಿಲ್ಲದೆ ಕಾಂಬೆನೆ ದೇವನ ?

ತುಳಿಯುದೆ ಮುಳ್ಳಿನ ಹಾದಿಯು
ಅರಿಯುದೆ ನೆನಸು ಮನಸುಗಳ
ನೆಚ್ಚು ಗಳಿಸದೆ ಗೆಯ್ಮೆಯಲಿ
ಪುಡುಕಲಹುದೇ ದೇವ ನಿನ್ನ ?

—:o:—

# ಸಾಕ್ಷಿ

ಶಿಕ್ಷಕಂ ಎನಿತು ವಿದ್ಯಾರ್ಥಿಗಳಂ
ಶತ ಮೂರ್ಖರನ್ನಾಗಿಸಿಹನೆನಲ್ಕೆ
ಪರೀಕ್ಷಾ ಪರಿಣಾಮವೆ ಸಾಕ್ಷಿ ಕಣಾ !

# ಭಾರತ ಧಾತ್ರಿ

ಸಿಡಿದೆದ್ದಿದೆ ಭಾರತ ಧಾತ್ರಿ !
ಜಯಕಾಳಿ ! ಜಯದುರ್ಗೆ !
ಜಯ ಜಯ ದಶಕಂಠಾರಿ !
ಎನ್ನುತ ನುಗ್ಗಿರಿ ಎಲ್ಲಾ !
ಝಣಕು ಝಣಕು ಝಣಕೆಂಬ
ಪಣಕು ಪಣಕು ಪಣಕೆಂಬ
ಭಂಡರ ಬಡಿವಾರ ಸಾಕು
ಬಡಿ ಬಡಿದು ಭಾರಿಸಿರಿ
ಕಾಲ ಭೈರವ ರಣಭೇರಿ !
ಜಯ ರುದ್ರ ! ಜಯ ಶಂಭೊ !
ಜಯ ಜಯ ಗೀತಾಚಾರ್ಯ !

ಜಯ ಜಯ ಜಯಹೇ !
ದಶಕ ದಶಕ ದಶಕಗಳ
ಭವದೀಯ ಕಣಕಣಗಳ
ಭೀಕರ ಕರಾಳ ರಾತ್ರಿ
ಕಲ್ಕಿಯಲಿ ಕಲ್ಕಿಯಾಗಿ
ನಡುಗಿಸೆ ಹೃದಯ ಧಾತ್ರಿ !
ಚಿಂತಿತ ಮನಃಪ್ರಾಣಗಳ್
ಅಳುಕಿ ಬಳುಕಿ ನಡುನಡುಗಿ
ಬಾಳ್ ಮುಗಿಬಗಿಯಾಯ್ತೆನೆ
ನೊಂದು ಕಣ್ಣೀರ್ ಕರೆದು
ಬೆಂದು ಬೆವರ್ನೀರ್ ಬಸಿದು
ಕಡುಗೋಳಿನ ಕಣಜದಲಿ
ಕಾಳ ಘನಘೋರ ರಾತ್ರಿ !

## ಭಾರತ ಧಾತ್ರಿ

ಸಂದುದು ಎಲ್ಲರೊಗ್ಗಟ್ಟಿನ
ಒಮ್ಮನ ಒಮ್ಮತಗಳ
ದಿಟ್ಟ ಹೋರಾಟದಲಿ !

ಸಿಡಿದೆದ್ದಿಹೆ ಭಾರತ ಧಾತ್ರಿ
ಜಯ ಕಾಳಿ ! ಜಯ ದುರ್ಗೆ !
ಜಯ ಜಯ ಪರಿಕಂಠಾರಿ !
ಎನ್ನುತ ನುಗ್ಗಿರಿ ಎಲ್ಲಾ !

ಇಡು ಕಿಚ್ಚು ಶಂಡ ಭಂಡತನಕೆ
ಮೋಣ್ ಸೋಮಾರಿತನಕೆ
ಏಳು ಏಳೈ ವೀರವರ !
ಬಿಗಿವಿಡಿ ರಾಷ್ಟ್ರರಥದ ಮಿಣಿ
ಧರ್ಮ ಕರ್ಮದ ನೇಮದಿ
ಹಿಡಿದು ಸಾಗು ರಾಜ ಪಥ
ಬರಲಿ ಹಿಂದೆ ರಾಷ್ಟ್ರರಥ !
ಕುಂದಿಲ್ಲದಿಸಿತು ಮತ್ತೆ ಮತ್ತೆ
ನೀಂ ಬಡಿದು ಬಾರಿಸೈ
ಕಾಲ ಭೈರವ ರಣಭೇರಿ !
ಜಯ ರುದ್ರ ! ಜಯ ಶಂಭೋ !
ಜಯ ಜಯ ಗೀತಾಚಾರ್ಯ
ಜಯ ಜಯ ಜಯಹೇ

—:o:—

## ಮೇರೆ

ಸ್ವಾತಂತ್ರ್ಯಕೆ ಇತಿಮಿತಿ
ಇರಲುಬಹುದು ಮೇರೆ
ಎಂಬುದು ಎಂದುಮೊಂದುಮಿಲ್ಲಂ !

# ಉತ್ತಿಷ್ಠತ ಜಾಗ್ರತ

ಉತ್ತಿಷ್ಠತ ಜಾಗ್ರತ
ಪ್ರಾಪ್ಯವರಾನ್ ನಿಬೋಧತ !
ಕ್ಷುರಸ್ಯ ಧಾರಾ ನಿಶಿತಾ ದುರತ್ಯಯಾ
ದುರ್ಗಂ ಪಥಸ್ತತ್ ಕವಯೊ ವದಂತಿ ||

ಅದೋ ಕೇಳಿ !
ಕಿವಿಯಿದ್ದ ಕಿವುಡರಿರ ಮನಗೊಟ್ಟು ಕೇಳಿ !
ಮೊಳಗುತಿದೆ ವೇದವಾಣಿ !
ನರಸತ್ತವರ ಕೂಗಿ ಕರೆಯುವ ದಿವ್ಯವಾಣಿ !
ದಮ್ಮಯ್ಯ ! ಕೇಳಿರೋ ಕೇಳಿ !
ಎನಿತೆನಿತು ಬಾರಿ ಕೇಳಿದೆಯಲ್ಲೊ
ಭಾರತ ಕೇಸರಿಯ ಸಿಂಹಘರ್ಜನೆಯಲ್ಲಿ !

ಮತ್ತಿದೇಂ ಹಗಲ್ ನಿದ್ದೆ ?
ಹಗಲಿರುಳ್ ಭೇದವನರಿಯದ ಜಡನಿದ್ದೆ ?
ಸರಸತಿ ಆಲಯಂಬೊಕ್ಕು
ವಿದ್ಯೆ ಬುದ್ಧಿಗಳ ಸಂಸ್ಕಾರವುಕ್ಕಿ
ಕುಡಿತ ಕುಣಿತಗಳ ಮರೆವೊಕ್ಕು
ಭೂಮಿಗೆ ಭಾರವಾದೊಡೇನಕ್ಕು ?

ಬಡತನದ ಬವಣೆಯೊಳ್ ಬೆಂದು
ಜೀವಿಸಲಾಗದೆ ನೊಂದು
ಬೋರೆಂದಳುತಿರೆ ಮನಂ ನೆಮ್ಮದಿ ತಪ್ಪಿ
ನಿಚ್ಚಂ ಸೋಮಾರಿತನಕೆ ಶರಣಪ್ಪಿ
ಮತಿಗೆಟ್ಟು ನಡೆಗೆಟ್ಟು
ತನ್ನ ತಾಂ ಮರೆತು ಲೋಕಕ್ಕೆ ಮಿತ್ತಾಗಿ
ದೇಹಕ್ಕೆ ನಂಜಾಗಿ

# ಉತ್ತಿಷ್ಠತ ಜಾಗ್ರತ

ಮಡದಿ ಮಕ್ಕಳಿಗೆ ಘೋರ ಮಾರಿಯಾಗಿ
ಸಾಗುತಿದೆ ಜೀವನ
ಈ ಬರೀ ಜೀವನ !

ಇನ್ನಾದರೂ ಕಿವಿಗೊಟ್ಟು ಕೇಳಿ !
ಕಬ್ಬಿಲಂ ಕಬ್ಬಿಗನಾಗುವ ಹುಮ್ಮಿನಲಿ
ಕಡುಬಡವಂ ಬಲ್ಲಿದನಾಗುವ ನೆಮ್ಮಿನಲಿ
ದಮ್ಮಯ್ಯ, ಕೇಳಿರೋ ಕೇಳಿ !

ಜೀವನ ಪ್ರಗತಿ ಸಹಸ್ರ ತರದಲಿ
ಮುಂದೊತ್ತಿ ಉದ್ಭವಿಸಲಿ
ಲೋಕೋತ್ತರ ಜಾಗೃತಿ
ತನ್ನ ತನದಲಿ ಅನಿರೀಕ್ಷಿತ ಜಾಗೃತಿ !

ಆಳಾಳ್ಗೆ ಬೆರಳ್ದೋರಿ ಕೈವೀಸಿ
ಕೂಗಿ ಕರೆಯುತಿಹ ವೇದಬಾಸೆ
ಜೀವನದಿಯು ಕಠೋರತರ ಚಾಗ ಸೊಲ್ಲು
ಲೋಕಕೆ ಪರಿಚಯಿಸುವ ವೀರ ಸೊಲ್ಲು !

ಕೇಳಿ ಕೇಳಿ ಮನಸುಮವರಳಿ
ಜಾಗೃತ ಜೀವನದಲಿ ಸಿಚ್ಚಂ ಮನವಿಟ್ಟು ನೀತಿಳಿಯೋ ಗುಟ್ಟು
ವೇದವಾಣಿಗೆ ಓಗೊಟ್ಟು
ಕಾಲಪುರುಷನೊಡನೆ ಹೋರಾಡಿ
ನೀನಾಗು ನವಜೀವನ ಸಂಯಾತ್ರಿ !
ನಾನಾಗುವೆ ನಿಜ ಸ್ಫೂರ್ತಿಯುಲಿ ದೇವಿ ಕವಯಿತ್ರಿ !
ಅದೋ ಕೇಳಿ !

ಕಿವಿಯಿದ್ದ ಕಿವುಡರಿರ ಮನಗೊಟ್ಟು ಕೇಳಿ !
ಮೊಳಗುತಿದೆ ವೇದವಾಣಿ !
ನರಸತ್ತವರ ಕೂಗಿ ಕರೆಯುವ ದಿವ್ಯವಾಣಿ !
ದಮ್ಮಯ್ಯ, ಕೇಳಿರೋ ಕೇಳಿ !

## ಶ್ರೀ ವಿಘ್ನೇಶ

ಶ್ರೀ ವಿಘ್ನೇಶ ವರಸಿದ್ಧ ವಿನಾಯಕ
ನಿತ್ಯಸಕಲ ವಿದ್ಯ ಪ್ರದಾಯಕ
ಪಾರ್ವತಿ ತನಯ ಮೂಷಕ ವಾಹನ
ಶರಣು ಶರಣು ಶರಣೆಂಬೆ ತವಪದತಲಕೆ

ಆದಿ ಪೂಜಿತ ತ್ರಿಲೋಕ ವಂದಿತ
ಸಕಲ ಮುನಿಜನ ಸೇವಿತ ಪುಣ್ಯನೆ
ನಾಗಭೂಷಣ ಹೇಮ ಕಂಕಣ
ನಿಟಿಲ ನೇತ್ರ ಕೊರಳಹಾರ ಪದಕನೆ

ದೀನ ಶರಣರ ದಿನ ನಿತ್ಯ ಪೊರೆವ
ಕರುಣಾಕರ ಕಮನೀಯ ಗಾತ್ರನೆ
ಕರ್ಣಕುಂಡಲ ವರ ಕಿರೀಟಧರ
ಚತುರ್ಭುಜ ಮಹಾ ಲಂಬೋದರನೆ

—:o:—

## ಕರೆ

ಅಕ್ಕ ಬಾರೆ, ತಂಗಿ ಬಾರೇ
ಎಲ್ಲರೊಂದು ಗೂಡಿ ನಿತ್ಯ
ಉತ್ತು ಬಿತ್ತಿ ಪ್ರೇಮ ಜಲದಿ
ಹೊನ್ನ ಬೆಳೆಯ ಚೆನ್ನ ಬೆಳಸಿ
ನಲ್ಮೆಯಿಂದ ನಲಿಯುವ

ಅಣ್ಣ ಬಾರೋ ತಮ್ಮ ಬಾರೋ
ಜನ್ಮ ಭೂಮಿಯ ಕಳೆದ ದಾಸ್ಯ
ಮತ್ತೆ ತಿರುಗಿ ಬಾರದಂತೆ
ಭದ್ರ ಹಿಡಿದು ರಾಷ್ಟ್ರ ಸೂತ್ರ
ಬಲ್ಮೆಯಿಂದ ಬಾಳುವ

## ಪವಿತ್ರಗಂಗಾ

ಹರನ ಜಟಾಜೂಟಾಗ್ರದಿಂ ಧುಮುಕಿ
ಹಿಮವಂತನ ಮಡಿಲಿಂ ತಾ ಪೊಣ್ಮಿ
ಶುಭ್ರಮನೋಹರ ಪ್ರಶಾಂತಿಯಿಂ
ತರಂಗ ಲೀಲಾ ಖೇಲನಗೈದು
ಲೋಕದ ಪಾಪರಾಶಿಯಂ ತೊಳೆದು
ಕೋಟಿ ಕೋಟಿ ಜೀವಾಜೀವಿಗಳ
ಪರಿಪೋಷಕಿಯಾಗಿ ನಿತ್ಯ ನಿರಂತರ
ಪುಣ್ಯವಾಹಿನಿಯೆಂಬ ಮಂಗಳಕರ
ನಾಮಾಂಕಿತದಿಂ ಮೆರೆದೊಪ್ಪಿ
ಹರಿವಳ್ಳೆ ಭಾರತ ಧರಾತಲದಿ
ಮಹಿಮಾಮಯ ಜಲರಾಶಿಯೆನಿರ್ಪ
ಪಾಪನಾಶಿನಿ ಪವಿತ್ರ ಗಂಗಾ !

—:o:—

## ನಾಮರಸಪಾನ

ದೂರದೂರ ಸಮುದ್ರಯಾನ
ಅಲೆಗಳೋಳಿಯ ತನನ ತಾನ !
ಕಿವಿಗಳಿಗಾಗೆ ಮಧುರಗಾನ
ಗೇಯ ಮಂತ್ರ ತಾನವಿತಾನ !
ಬಿಂದು ಬಿಂದು ಕೂಡಿ ಜ್ಞಾನದಾನ
ಕವಯಿತ್ರಿಯ ಜೀವಮಾನ
ನಿತ್ಯ ನೆಯ್ಯಲದುವೆ ವಚನಗಾನ
ನೆನೆದು ನಿಮ್ಮ ಹಾಡೆ ರಮ್ಯಗಾನ
ಇಂತು ದೇವದೇವನ ನಾಮರಸಪಾನ.

# ಗಮ್ಯಸ್ಥಾನ

ಪೆರ್ಮರನ ನಿಡುರೆಂಬೆಯಲಿ
ಅಕ್ಕರೆಯಿಂದ ಪೊದಳೆದ ಗೂಡಿನಲಿ
ಒಡಹುಟ್ಟುಗಳೊಡಂ ಚಿಲಿಪಿಲಿ
ರಾಗವ ರಾಗಾನುರಾಗದಿಂದಲಿ
ಹಾಡಿಪಾಡಿ ನಲಿದಾಡಿದ ಹಕ್ಕಿಮರಿ
ಲೋಕದ ನಂಜಿಗೆ
ಈಡಾದುದು ನಿನ್ನಿಂದಲ್ತೆ ಹರಿಯೆ !
ಅಕ್ಕರೆಯ ಮರಿಯಂ
ಕೊಕ್ಕರೆಯ ಬಾಯ್ಗೆ
ಸಕ್ಕರೆಯೊಲು ನೀಡಲ್ಕೆ
ನಿನ್ನ ಮನವೆಂತು ಸಂತು ಪೇಳ್ವೆ ?
ವಿದ್ಯಾ ಸಂಸ್ಕಾರಕೆ ಪುಳ್ಳಿಕಂಪಿ ನೆಟ್ಟು
ಅಂತಃಸಂಸ್ಕಾರಕೆ ಎಡೆಯೀಯದೆ
ಕಳ್ತಲೆಯ ಕೂಪಕೆ ನೀನೇ ತಳ್ಳಿ
ನರಕದಾಳವನ್ನು! ಕಣ್ತುಂಬ ನೋಡಿದೆಯಲ್ಲೋ ಸ್ವಾಮಿ!
ನಿನ್ನಾಶಯಮಂತಿರೆ ಆನೆಂತು
ಅರಸುವೆನೈ ಗಮ್ಯಸ್ಥಾನವ ಶ್ರೀಹರಿಯೆ !

—:o:—

# ಸ್ವಾತಂತ್ರ್ಯ

ಕೇಡು ಮಾಡುವರೆ ಅವಕಾಶ
ಇಲ್ಲದೊಡೆಲ್ಲಿಯ ಸ್ವಾತಂತ್ರ್ಯವೈ ?

—:o:—

# ಅನ್ನದಾತನ ಯಜ್ಞವೇದಿ

ಯಾವತ್ಕಾಲಂ ಮುಂಗೋಳಿ ಕೂಗಿಗೆ ಎಚ್ಚೆತ್ತು
ಮೂಡುವೆಣ್ಣು ಮೆಲ್ಲನೆ ಕಣ್ದೆರೆವ ಮುನ್ನ
ಹೊಲ-ಗದ್ದೆಗಿಳಿವ ಮಮತೈತ ಬಂಧು !
ಮುಂಬಕ್ಕಿಗಳ್ ರೆಕ್ಕೆಗಳಂ ಪಟಪಟಿಸಿ
ಚಿಲಿಪಿಲಿ ರಾಗವಂ ಪಾಡುತಿರೆ ಗಿಡಮರಗಳಲಿ,
ಎದೆಗಡಲಲಿ ರಾಗಾರುಣತಾನ ಉಕ್ಕುಕ್ಕಿ
ಮನವರಳಿ ನಲವಿಂ ಒಲವಿಂ
ತಾಂ ದನಿಗೂಡಿ ಹಾಡಿ ಪಾಡಿ ಎತ್ತುಗಳ
ಹುರಿದುಂಬಿಸಿ ಉಳುವನ್ನೈ ನೇಗಿಲೊತ್ತೊತ್ತಿ
ಪಚ್ಚಯಜ್ಞದ ಸಿಚ್ಚ ಯಾಜ್ಞಿಕ !
ನೇಗಿಲ ಕುಳದ ಗೆರೆಗೆರೆಗಳಲಿ
ರಾಷ್ಟ್ರದ ಹಣೆಬರಹವಂ ತಿದ್ದಿ ತಿದ್ದಿ
ಅದೃಷ್ಟಾದೃಷ್ಟಗಳಂ
ಚಂದದಿಂ ತಾಂ ಉಲ್ಲೇಖಿಸುವನ್ನೈ ಕೃಷಿಜ್ಞಾನಿ !
    ಆದೊಡೇಂ ? ಏನೆಂಬೆಯಾತನ ಭಂಗ ಒನ್ನಂ ?
ಬಡ ಕೈಗೆ ಲೆಕ್ಕಣಿಕೆಯಿಲ್ಲಂ ;
ಜಿಹ್ವೆಗೆ ವಾಗ್ಮಿತೆಯಿಲ್ಲಂ ;
ಸಮಯಸ್ಫೂರ್ತಿ ಇಲ್ಲವೈ ಚಿತ್ತಕಲ್ಪಕೆ.
ರಾಜ್ಯಭಾರದಿಂ ಮೆಯ್ಯಮೂಳೆ
ಸಿಟಿಸಿಟಿಲಿಸುತಿರೆ ಹೊಟ್ಟೆ ಬೆನ್ನಿಗೆ ಹತ್ತಿ
ಉಣಲಿಲ್ಲದೆ; ಉಡಲಿಲ್ಲದೆ ;
ಉತ್ತಮ ವಸತಿಯಿಲ್ಲದ ಸಿಕ್ತ ತಾಂ ನೋವುಂಡು
ಒಡಲ್ಗಿಚ್ಚಿನಿಂ ನರಳಿ ಹೊರಳಿ
ಉರುಳು ಸೇವೆ ನಡೆಸುತ್ತಿರುವನ್ನೈ ಕುಟುಂಬ ಸಹಿತ
ಜವನರಮನೆಯೆಡೆಗೆ !

## ಅನ್ನದಾತನ ಯಜ್ಞವೇದಿ

ಮಾಸಲು ಮೆಯ್ಯ ಕೃಷೀವಲನ
ಜೀವ ತಹತಹಿಸಿದೊಡಂ
ಮರುಗುವವರಿಲ್ಲ; ನೋವರಿಲ್ಲ; ಕಾವರಿಲ್ಲ.

ಬೇಸಗೆಯ ಬಿಸಿಲ್ ರಣರಣಿಸುತಿರಲ್ ಎಲ್ಲೆಡೆ
ಕುಡಿಯೆ ನೀರಿಲ್ಲದಾ ರಣಗೋಳು !
ಓವ್ರೋ, ಎಂದುಮೆಂದಿಗೂ ಇದುವೆ ಕಣಾ !
ಅಹೋ ಪಾತ್ರ ! ಅಹೋ ರೂಪ ! ಅಹೋ ಧ್ವನಿ !
ಇಂತಪ್ಪ ಕಡುನೋವಿನಾಗರದಿಂ
ಪರಿದಿರಲ್ ಕಂಬನಿಯ ಕೋಡಿ ದಿನದಿನಂ ;
ಜಗವೆ ಕಂಡೂ ಕಾಣದವೋಲ್
ಸೊಗದಿಂ ಕೂತುಂಬುವರೆಲ್ಲಿಯ ಮರುಕವೈ
ಅನ್ನದಾತನ ಯಜ್ಞವೇದಿಗೆ ?

—:o:—

## ಕಾಗೆ

ಕಾ ಕಾ ಎಂದರಚುತ ಕರ್ರನೆ
ಬಾಳ್ವ ಕಾಗೆ-ಆರಿಗು ಸಲ್ಲದ
ಒಲ್ಲದ ಕರಿಯ ಕಾಗೆ ಬಾಳ್ವುದೆನೆ
ನೂರಾರು ವರುಷ ಹರುಷದಿಂದೆ
ಈ ಸೋಜಿಗವನೇವೇಳ್ವೆನೋ.

—:o:—

# ಶ್ರೀರಂಗನಾಥನ ರಥೋತ್ಸವ

ಓವ್ರೋ, ಜನಮರುಳೋ ಜಾತ್ರೆಮರುಳೋ
ಎಂಬಾ ಗಾದೆ ಇಂದು ನಿನ್ನೆಯದಲ್ಲ ಕಣಾ !
ನಾಡಿಗರ ನಾಡಿನಾಡಿಯಲಿ ಪರಿವ
ಕೆನ್ನೆತ್ತರ ವಾಹಿನಿಯೊಳ್ ಬೆರೆತು
ನಿತ್ಯ ಸಂಚಯನಮಾದೊಡಂ ವಿಚಾರ
ಸಂಕೀರ್ಣಂ ಅರಳಲಿಲ್ಲೈ ಮನಮನದಲಿ !

ಶ್ರೀರಂಗನಾಥಂಗೆ ದೇಗುಲಂ ಸಾಲದೇಂ ?
ಇನ್ನು ರಥೋತ್ಸವದಾ ಝಂಜಡವೇಕೆ ?
ಅನವಶ್ಯಕ ಆಡಂಬರದಾಚರಣೆಗಳ್
ಅಜ್ಞರ ಪಾಲಿಗೆ ಸಕ್ಕರೆ ಸವಿಯಂ
ತೋರ್ದವೊಲ್ ಭವ್ಯ ಆಕರ್ಷಣೆಯ
ಆಯಸ್ಕಾಂತಮಲ್ತೆ ರಥೋತ್ಸವಂ !

ಹಲವು ಕಟ್ಟು ಕಟ್ಟಳೆಯ ವಿಪ್ರಯೋಜಿತ
ವಜ್ರಕೋಟೆಯಲಿ ಸಿಲ್ಕಿರಲ್ ಧರ್ಮನಿಧಿ
ಮುಗ್ಧದುಗ್ಧರಂ ಇನ್ನಿನಿತು ಮೌಢ್ಯದ
ಪಂಕದಲದ್ದಿ ಅಂತ್ರತಂತ್ರಮಂತ್ರಗಳ
ಮಹಾಪೂರದಲ್ಲಿ ಕೊಚ್ಚಲ್ ಅನುಕೂಲವೈ
ಮಸಣರಂಗಮಂಚದ ವಿಶ್ರಾಂತಿಗೆ !

—:o:—

# ದಿವ್ಯವಾಣಿಗೆ

ಸ್ವಾಗತವು ಸ್ವಾಗತವು ಸ್ವಾಗತವು
ಹೃತ್ಪೂರ್ವಕ ಸ್ವಾಗತವು ದಿವ್ಯವಾಣಿಗೆ !
ಜನಮನದಲಿ ವಿಶ್ವಪ್ರಜ್ಞೆಯಂ
ಅರಳಿಸಿ ಶಾಂತಿ ಸಂಧಾನವಂ
ಮೂಡಿಪ ವಿದ್ಯಾಕೋವಿದ ಧನ್ಯವಾಣಿಗೆ !

ಯುಗಯುಗಗಳ ಅಜ್ಞಾನದಿಂದೆಮ್ಮ
ಎಚ್ಚರಿಸಿ ವಿಜ್ಞಾನ ವಿದ್ಯೆ ಬೋಧಿಸುವ
ಸುಜ್ಞಾನ ಮೂರ್ತಿಯು ಸರ್ವಜ್ಞ ವಾಣಿಗೆ !
ದೂರದೂರದಲಿ ಶತಕೋಟಿ ಸೌರ್ಯಲಿಗೂ
ಮೀರಿದ ದೂರದಲಿ ಹೊಂಬೆಳಕಿನ
ಹೊನ್ನಗೆಸಿರಿ ಸೂಸುವ ಸೂರ್ಯ ಸಂದೇಶಕೆ !

ನಿಚ್ಚ ತನ್ನಾತ್ಮ ಸಂಸ್ಫೂರ್ತಿಯಲಿ ತೇಲಿ
ಸರ್ವ ನಿಯಮ ಋತು ಚಕ್ರದಲ್ಲಿ
ಸುತ್ತಿ ಜನಪದಕೆ ಉಸಿರೀವ ಮಾರುತವಾಣಿಗೆ !

—:o:—

# "ಕೋಶವಾನ್ ಆಚಾರ್ಯಃ"

ಗ್ರಂಥವಿಲ್ಲದೆ ಬಪ್ಪುದೇಂ
ಘನವಿದ್ಯೆ ಜಗದೊಳ್ ?
ಗ್ರಂಥಗಳೆ ವಿದ್ಯಾಲಯ
ಸೋಣಾಚಾರ್ಯ ಕಣಾ !

—:o:—

## ಗೌರೀ ತನಯ

ವಂದಿಸುವೆನೊ ಚೆಂದದಿಂದ
ಸುಂದರಾಂಗ ಶ್ರೀ ಗಣಪನೆ !
ಹಿಂದೆ ಮುಂದೆ ನೋಡದಿನಿತು
ತಂದೆ ಕೈಬಿಡದೆ ಕಾವುದೆಮ್ಮ

ಮಂದ ಮತಿಯ ಭಂಗ ಕಳೆದು
ಬಂದ ವಿಘ್ನವೆಲ್ಲ ತರಿದು
ತಂದೆ ನೀನೆ ಪೊರೆಯೊ ಎನ್ನ
ನೊಂದು ಬೇಡಿಕೊಂಬೆ ನಿನ್ನ

ಅಂದದಿಂದ ವರವ ಕೊಟ್ಟು
ನಂದದಿಂದ ಹರುಷವಿತ್ತು
ಬಂಧವೆಲ್ಲ ತುಂಡುಗಡಿದು
ಬಂದು ಕಾಯೊ ಗೌರೀ ತನಯ !

—:o:—

## ಪ್ರಾಮಾಣಿಕತೆ

ಒಳ್ಳೆಯತನಂ ಕೈಗೂಡಿಸೆ
ವಿಫಲನಾದೊಡೆ ಪ್ರಯತ್ನಿಸೈ
ಪ್ರಾಮಾಣಿಕತೆಯಂ ಬಲಿಸೈ,
ಅನೃತವ ಕಿತ್ತೀಡಾಡೆ ಜಸನ್ಸೈ
ಜಗದಿ ಸಂಜೀವನ ಯಾತ್ರೆಗೆ

—:o:—

# ಹೃತ್ ಬನದ ಗುಡಿಗೆ

ಓ ಎನ್ನ ಸಿರಿದೊರೆಯೆ ! ಎಂದಿಗೈತರುವೆ ನೀ
ಎನ್ನ ಹೃತ್ ಬನದ ಗುಡಿಗೆ ? ನೀ ಬರುವೆ ಎಂದು
ಭಕ್ತಿಯ ಗುಡಿಯಂ ಕಟ್ಟಿ, ಪ್ರೇಮದ ದೀಪಿಕೆಯ
ನಿಟ್ಟು ದಿವ್ಯ ದರುಶನವ ಬೇಡುವೆನೋ ಪ್ರಭುವೆ !
ಹಗಲಿರುಳು ನಿನ್ನಯ ಪರಮ ಚಿಂತನೆಯಿಂದಲಿ
ಕಾದಿರೆ ಇನಿತು ಕರುಣೆದೋರದಿರುವುದು ಸರಿಯೆ ?
ಮೊಲ್ಲೆ ಮೊಗ್ಗುಗಳ ಬಿಡಿಸಿ ವರ ಮಾಲೆಯ ನೆಯ್ದು
ಹಣ್ಣು ಹಂಪಲೊಡಂ ಪರಿಮಳಿಪ ಸಿರಿಗಂಧ
ಕೆನೆಹಾಲು ದಧಿಘೃತವ ಹದನಿಸಿರುವೆ, ದೊರೆಯ
ಲಾಲಿಸಿ ಕರುಣೆಯಿಂದ ಬಾರಯ್ಯ ಎನ್ನರಸ !
ದೂರದೊಳ್ ಕೇಳಿಸಿತೊರ್ವೆ ನಿನ್ನ ಇನಿಗೊಳಲ
ಸವಿನಾದ, ಮತ್ತೊರ್ವೆ ತವಕೀರ ತೇಜಿಗಳ
ಕಿರುಗೆಜ್ಜೆಯ ಸದ್ದು ತನುಮನಂ ಪುಳುಕಿಸುವೊಲ್ ?
ಮತ್ತದರ ಸುಳುವಿಗಾನು ಕಾದು ಬಳಲ್ದೊಡಂ
ನಿನ್ನ ದರುಶನ ದೊರೆಯದೆ ಬಲು ಬೇಸತ್ತೆನ್ನೈ
ಎನ್ನಯ್ಯನಯ್ಯ ಕರುಣಾಕರನೆ ದಯೆದೋರು.

—:o:—

# ಕುಟುಂಬ

ಕೌಟುಂಬಿಕ ಸುಖ ಸಾಧನಾ
ತಳಹದಿಯು ನಾರೀ ಜೀವನ
ರೀತಿ ನೀತಿಗಳ ಪ್ರೇರಣ ಕಣ !

—:o:—

## ಸಂಶಯ

ದಿನದಿನ ಜಾನಿಸಿ ಮನದಲಿ
ಚಣಚಣ ಯೋಚಿಸಿ ಮತಿಯುಲಿ
ತೀರದ ಸಂಕೆಯಿಂ ಮುಸಗಿ
ಓರ್ವ ತರುಣಂ ಗಾಂಧೀಜಿಯು
ಬಳಿಗೈದು ಕೇಳ್ದನೆಂತನೆ
"ಬಾಪೂ ! ಶ್ರೀರಾಮಾಯಣಂ
ಸತ್ಯಕಥನಮೊ ಬರಿ ಮಿಥ್ಯ
ಕಥನಮೊ ನಿಮಗೇನೆನಿಪುದು
ಪೇಳಿರಿ." ಆಗಳ್ ಗಾಂಧೀ
ಮಹಾತ್ಮರ್ ನಸುನಗುತಿಂತು
ನುಡಿದರ್ "ರಾಮಾಯಣದಾ
ಕಾಲದೊಳಾನಿರಲಿಲ್ಲಂ ;
ಎನೆ ಆನದಂ ಕಣ್ಣಿನಿಂದ
ಕಂಡು ತಿಳಿದೆನಂತು ಇಲ್ಲ.
ಆದೊಡದನನುಕರಿಸಿ ನಾಂ
ಸಾತ್ವಿಕನಾದುದು ನಿಜ ಕಣ !"
ಎಂದೆನಲ್ ಆ ತರುಣಂ ತಲೆ
ಬಾಗಿ ಅಮಿತ ವಿನಯದಿಂದ
ಕೈಮುಗಿದಂ ಧನ್ಯನಾದೆ
ಎಂದೆಂಬ ಸಂತೃಪ್ತಿಯಿಂದೆ.

—:o:—

## ರಕ್ಕಸರ ದಂಡು

ಒಂದು ಮಗುವಿರೆ ಸಲ್ಲದು ಜೀವನಕೆ
ಎರಡಿರೆ ಒಂದರ ಸಮಂ ಲೆಕ್ಕಕೆ
ಮೂರಿರೆ ರಕ್ಕಸರ ದಂಡು ಹಿಂಸ್ರಕೆ

## "ಜನನೀ ಜನ್ಮ ಭೂಮಿಶ್ಚ ಸ್ವರ್ಗಾದಪಿ ಗರೀಯಸಿ"

ಅದ್ಭುತ ವಿಜಯಿ ನೆಪ್ರೋಲಿಯನ್ ಒರ್ಮೆ ಸಾಗರ
ತಡಿಯ ಸೇನಾಶಿಬಿರದೊಳ್ ಬೀಡು ಬಿಟ್ಟಿರ್ದಂ.
ಪೊಳ್ತುರುಳಿ ಕಾಳರಾತ್ರಿ ಅಡರಿ ಬರೆ ಸೈನಿಕ
ಶಿಬಿರಂ ವಿಶ್ರಾಂತಿಗೆತ್ತುದು 'ಹಾ' ಎನುತ ಹಗಲ
ಬವಣೆಯುಂ ಬದಿಗೊತ್ತಿ. ಸಾಗರಿಯ ಘೋರ್ಗರೆತ
ನೀರವತೆಯ ತೆರೆಯಂ ಕೋರೈಸುತಿರೆ ಸತ್ಯ
ಸುಂದರಮೆನಿಸುತಿರ್ದುದು ಆ ನಲ್ ನಿಲ್ದಾಣಂ.
ಅಂತಪ್ಪ ಕಾಳರಾತ್ರಿಯಲಿ ಸಣ್ಣ ದೋಣಿಯ
ನೆರವಿನಿಂದೊರ್ವ ಕೈದಿಯು ಕಡಲತಡಿಗಿಳಿದು
ಸದ್ದಿಲ್ಲದೆ ಫಲಾಯನದ ಸಾಹಸದಲಿರ್ದುದಂ
ಕಂಡ ಶಿಬಿರದ ಸೈನಿಕರ್ ಸಾಹಸಂ ಬಟ್ಟು
ಕೈಸೆರೆ ಹಿಡಿದು ಹೆಡೆಮುರಿಗಟ್ಟಿದ ಮಾಳ್ಕೆಯೊಳೆ
ದರದರನೆಳೆತಂದು ಅವನಂ ಒಡೆಯನೆದುರಿಗೆ
ದಿಂಡುಗೆಡಗಲಾ ನೆಪ್ರೋಲಿಯನ್ ಕೇಳ್ದನೆಂತನೆ–
"ಜೀವದಾಸೆಯಂ ತೊರೆದು ಕಡಲಂ ದೋಣಿಯೊಳ್
ದಾಂಟುವಾ ಸಾಹಸಂಗೈವ ಕಾರಣಮೇನ್ನೈ ?"

ಅದಕ್ಕಾತರುಣ ವಿನಯದಿಂ 'ಕೇಳ್ ಒಡೆಯಾ !
ಎಂತಿರ್ದೊಡಾನಿಲ್ಲಿ ಸತ್ತು ಮಣ್ಣಾಗುವುದು
ದಿಟಂ. ಇಂತಿದರೊಳೆನ್ನ ಜೀವನದಲುಳಿದಿರ್ದ
ಕೊನೆಯಾಸೆಯಂ ತೀರಿಸ್ರೊಂದು ಸಾಹಸದೊಳಾಂ
ಸಾವೊಪ್ಪಿದೊಡೆ ವ್ಯಥೆಯಿಲ್ಲಮೆನೆ ನೀ ನಂಬು !
ಮುನ್ನೆ, ರಣರಂಗಕಾಂ ಪುಗುವಂದು ಎನ್ನಮ್ಮ–
ವೃದ್ಧ ಜನನಿ ರೋಗವಸದಿಂದೆ ಬಳಲಿ ರುಣ್ಣ
ಶಯ್ಯೆಯಲಿ ಮಲಗಿರ್ದಳ್. ಕೈಮುಗಿದೊರೆವೆ ನಾಂ

## 'ಜನನೀ ಜನ್ಮ ಭೂಮಿಶ್ಚ
## ಸ್ವರ್ಗಾದಪಿ ಗರೀಯಸಿ'

ಸಾಯುವ ಮುನ್ನ ಅವಳಂ ಕಾಂಬುದೊಂದು ಮೇಣ್
ಜನ್ಮಭೂಮಿಯಂ ಸಂದರ್ಶಿಸುಪ್ಪೊಂದು ಕೊಟ್ಟ
ಕೊನೆಯ ಪೇರಾಸೆ ಇರ್ದುದೆನ್ನಯ ಚಿತ್ತದೊಳ್,
ಈಗಳದಂ ತೀರಿಪ್ಪೊಂದು ಸಾಧನೆಯೆ ಈ ಮಹಾ
ಸಾಹಸಂ ಕಣ !"

ಅವನ ನಿಜಭಕ್ತಿಯನರಿತ
ಬಳಿಕ ಕಲ್ಲೆದೆಯ ಯುದ್ಧಪ್ರೇಮಿ ನೆಪ್ಪೋಲಿಯನ್ನನ
ಕಣ್ ಕೆಮ್ಮನೆ ರಂಗೊರೆದುವು ಮನಂ ಬಿಸಿಲಟ್ಟಿದ
ಹಿಮದೊಲ್ ಕರಗಿ. ಒಡನೆ ಬಳಿಸಾರ್ದವನ ಬೆನ್ನ
ನಿಳುಪಿ ನಲ್ಮೆಯಿಂ 'ಎಲೆ ಕೆಚ್ಚೆದೆಯ ಸೋದರನೆ !
ಆನೆನ್ನ ತಾಯಿಯ ಪ್ರಿಯ ಪುತ್ರನಿರೆ ಮತ್ತಮಾ
ಜನ್ಮಭೂಮಿಯ ಮಹದ್ ಭಕ್ತನಿರೆ-ನಿನ್ನ ಈ
ಸಂದರ್ಭದೊಳ್ ಕ್ಷಮಿಸಿ ಬೀಳ್ಕೊಡುವುದುಚಿತಂ ;
ನೀಂ ಸುಖಪಯಣಂಗೊಂಡು ನಿನ್ನ ಜನನಿಯಂ ಮೇಣ್
ತಾಯ್ನಾಡಂ ಕಂಡು ಧನ್ಯನಪ್ಪೈ ! ಶುಭಮಕ್ಕೆ !'
ಎಂದು ಪರಸಿ ಬಂಧನದಿಂದೆ ಬಿಡುಗಡೆ ಮಾಡಿ
ಭ್ರಾತೃಪ್ರೇಮದಿಂ ಬೀಳ್ಕೊಟ್ಟನಾ ಕೈದಿ ವೀರನಂ.

—:o:—

## Grandma Moses

ಅಂದು ತನ್ನ ಆಯುರ್ಮಾನದಾ
ಶತಾಬ್ಧಿಯಲಿ ಮಿಂದು ದಣಿದೊಡಂ
ರೇಖಿಸುತಿರ್ದಳೈ ಚಿತ್ರಗಳಂ
ಗ್ರಾಂಡ್ ಮಾ ಮೋಸಸ್ ನಿಜದಿ.

—:o:—

# ತರುದೇವ

ಪಚ್ಚಸೆಯ ಪಸುರ್ವೊತ್ತ ವಿಪಿನ ಸಾಮ್ರಾಜ್ಯದಾ
ಮಹಾ ಸಾರ್ವಭೌಮ ಗಗನಚುಂಬೀ ತರುದೇವ
ಎಳೆವಳಿರಿಂ ನೈದುಂಬಿ ನರುಗಂಪ್ರುಗುವ ಶ್ವೇತ
ವರ್ಣಾಂತ ಪ್ರೂ ಹಿಲಾಲುಗಳ ಪ್ರೊತ್ತು ಶೋಣಿತ
ಶೋಭಾ ಶೈಲಿಯಲಿ ಶಿವ ಸಾನ್ನಿಧ್ಯಮೆನೆ ನಲವಿಂ
ಪರೆಗೈಗಳಾಡಿಸುತಿದೆ ಮರ್ಮರ ಸದ್ನುಡಿ !
ಸುಡುವಗಲಿನ ವಸಂತ ಪ್ರಭುವಿನೊಡ್ಡೋಲಗಂ
ಸೂರ್ಯ ಪ್ರಖರ ಕಿರಣಗಳಿಂ ತಾ ಜೇಯುತಿರೆ
ಮೆಲು ಮೆಲ್ಲನೆ ಬೀಸುವ ಬನಗಾಳಿ ಮೈಕಾದು
ಸುಯ್ಯನೆ ಸುಯ್ಯುತಿರಲ್ ವಿವಿಧ ಪಕ್ಷಿವಳಗಂ
ತಣ್ಣನೆ ಗಿಡುಬಳ್ಳಿ ತರುನಿಕರವನಾಶ್ರಯಿಸಿ
ರಾಗಾರುಣರಾಗವ ಸೂಸಿ ಉಲಿಯುತಿರಲಾ
ಸತ್ಯಶೋಭಿತ ಚಿತ್ರಣವ ಭಾವಿಸಿ ನೋಡಾ !

—:o:—

# ಶ್ರೀಗುರುವೇ ನಮಃ

ಗುರುಬ್ರಹ್ಮಾ ಗುರುರ್ವಿಷ್ಣುಃ
ಗುರುರ್ದೇವೋ ಮಹೇಶ್ವರಃ ।
ಗುರುರೇವ ಪರಂ ಬ್ರಹ್ಮ
ತಸ್ಮೈ ಶ್ರೀ ಗುರವೇ ನಮಃ ॥
ದೇವ ನಿಮ್ಮ ದಯೆಯಿಂ ನರಜನ್ಮವನೆತ್ತಿ
ಈ ಇಳೆಯೊಳ್ ದಿವ್ಯ ಸಂಸ್ಕೃತಿಯನಾಂತೈದು
ನಿಮ್ಮ ನಮಿಸ್ರೊಂದು ಘನ ಪುಣ್ಯಮಂ ಪಡೆದೆವು
ಜೀವನಂ ನಿಮ್ಮ ಪದಯುಗಕೆ ಮುಡುಪಿಡುವೆಂ,
ಕೈಕೊಳ್ಳಿರೈ ಪಾಪಪುಣ್ಯಗಳ ಹೇರಾಶಿಯುಂ.
ಹೇ, ಮಮ ಸದ್ಗುರುಗಳೇ ನಿಮಗೆನ್ನ ನಮನ !
ಮತ್ತೆ ಮತ್ತೆ ನಮನ ! ಶಿರಸ್ಸಾಷ್ಟಾಂಗ ನಮನ !

# ವೃಕಾಸುರ *

ತಿಣುಕಿತಿಣುಕಿ ತೀರದಾಸೆಯಲಿ ತಾಂ ಸೆರೆಸಿಲ್ಕಿ
ಅನ್ನ ನೀರು ನಿದ್ದೆಗಳ ತೊರೆದು ಎಣೆಯಿಲ್ಲದ
ತಪವನೋಂತು ದಿನಗಳೆಯುತಿರೆ ಮುನ್ನೆ ಕಶ್ಯಪ
ಕುವರ-ವೃಕಾಸುರಂ ಮೇರು ಪರ್ವತ ಪಾತ್ರದಲಿ;

ಹಾ, ಏನೆಂಬೆ ಅತಿ ದುರ್ವಾರ ದುರಾಸೆಯು
ದಟ್ಟ ತೆರೆ ಜಡಿಮುಸುಗಿ ಶೈವಾಲಜಾಲಾಚ್ಛನ್ನ
ಕಾಸಾರದಂತಾತನಂ ವರ್ಷಾನುವರ್ಷಗಳಿಂ
ಸಂಚಿತ ವಜ್ರತ್ವದ ಮೂರ್ತಮಾದತ್ತು ತಪಘನಿಸಿ.

ಸಂದುವು ವರ್ಷಮಾಸಂಗಳ್ ಉಗ್ರ ತಪಜ್ವಾಲೆ
ಧಗಧಗಿಸುತ್ತಿರೆ ಎಡೆವಿಡದೆ, ಲೋಗರ್ ಬೆದರಿ
ಗಾರಾಗಿ ಏನಾದಪುದೊ ಎಂದು ಚಿಂತೆಯಿಂ
ತಳಮಳಿಸಿದರ್ ಮನದೊಳ್ ಕಾತರಮಂ ತುಂಬಿ.

ಮರದಡಿಯಿಂ ಕದಲದೆ ನಿಚ್ಚ ತಪಃಶೀಲ
ವೃಕಾಸುರಂ ಮಂಡಿಸಿರ್ದನ್, ಬಂಡೆಗಲ್ಲಿಗಿಂ
ಮೀರ್ದ ಗೋರರೂಪಿನ ಮಂದೇರುಹಾಕ್ಷನಂ
ಪ್ರೋಲ್ದು; ತಪಃಜ್ವಾಲೆ ಧಗಧಗಿಸುತಿರೆ ಸುತ್ತಲುಂ!

ಸುರರು ನಡುನಡುಗಿ ಸ್ವರ್ಗದ ಹೊನ್ನ ಬಾಗಿಲೊಳ್
ಇಣಿಕಿ ನೋಡಲ್ ತಪಃಜ್ವಾಲೆ ತಾಗಿ ಸುಟ್ಟುರಿಪು
ಹೋದೆ ಗಡ್ಡಮೀಸೆಗಳ್, ತೆಕ್ಕನೆ ಹಿಂಜರಿದು
ಬಾಗಿಲಂ ಮುಚ್ಚಿ ಚಿಂತಿಸಿರೆ ತಮ್ಮತಮ್ಮೊಳ್ ;

# ವೃಕಾಸುರ

ಆಶ್ಚರ್ಯವಿಸ್ಫಾರಿತ ನಯನಚಕೋರಕಗಳಲಿ
ಮಿನುಗಿದ ಕುಡಿ ಮಿಂಚೊಳ್ ಭಯಭೀತಿಯ ಛಾಯೆ
ಪೊಣ್ಮಿದುದು ಮುಂತೇಂ ಗತಿಯೆಂದೆಂಬವೊಲ್
ಆಗಳೇನೆಂಬೆನೊ, ಸಗ್ಗಿಗರ ಗಡಿಬಿಡಿಯಂ ?

ಕೆಲಬರುಂ ಮುಚ್ಚಿಗೊಳೆ ; ಕೆಲಬರುಂ ನಡುನಡುಗೆ ;
ಕೆಲಬರುಂ ಚಣದೊಳೋಡಿ ಕೈಲಾಸಮಂ ಪೊಕ್ಕರ್ !
ಅಭವಂಗೆ ನಯದಿಂ ಕೈಮುಗಿದು ಅಡ್ಡ ಬಿದ್ದು
ಬೇಡಿಕೊಂಡರ್ ಬನ್ನಮಂ ಕೊನೆಗಾಣಿಸಲ್ಕೆ.

ಆಗಳಾ ಕೈಲಾಸದಧಿಪತಿಯುಂ ಸಗ್ಗಿಗರ್ಗೆ
ಅಭಯಮಿತ್ತು ಪೊರಮಟ್ಟಂ ಭೂಮಾರ್ಗಂಗೆತ್ತು.
ನೋಡೆ, ಮದ್ದಾನೆ ಮದಾವಸ್ಥೆಗೇರ್ದು ಮುಚ್ಚಿಗೆ
ಸಂದುದೆನೆ ನಿಶ್ಚಲಂ ; ನಿಸ್ಪಂದಂ ; ನಿರಾಕುಲಂ.

ಉಗ್ರತಪವನೋಂತಿರೆ ಕಶ್ಯಪನ ನಿಜಸುತಂ
ಮೂಜಗಂ ಮರೆತು ಅಂತಃಪ್ರಜ್ಞೆಯುಂ ಘನಿಸಿ
ಲೋಕ ವ್ಯವಹಾರವನೆ ಕೊನೆಗಾಣಿಸಿರ್ದಂ :
ಅಸುರಗತಿಗೆ ಅಪವಾದವೆನಿಪವೋಲ್ ಕಣಾ !

ಅಭವಂ ತಳಕ್ಕನೆ ಸೆಳೆಮಿಂಚಿನೊಲ್ ಸುಳಿಯಲ್
ಕಶ್ಯಪ ಕುವರಂ ಕಣ್ತೆರೆದು ನೋಡಿ ಕೈಮುಗಿದು
ಕಾಲ್ವಿಡಿದು, ಬಳಿಕ್ಕಂ ವಿನಯದಿಂ ಕೈ ಜೋಡಿಸಿ !
ನುಡಿದನಿಂತು 'ಜೀಯ, ಎನಿತು ಕಾಲ ಕಾದಿರ್ದೆಂ,

## ವೃಕಾಸುರ

ನಿನ್ನೊಂದು ದಿವ್ಯ ದರ್ಶನಕೆ? ಅಹ, ಇಂದಲ್ತೆ
ಸುದಿನಮೆನ್ನಯ ಜೀವನದೊಳ್ ಎನ್ನೊಡೆಯಾ !
ಬಲು ಸಂಕಷ್ಟದಿಂದಾನು ತಪವನೋಂತಿಹೆನ್ನೈ ;
ನಿನ್ನಂ ಬಿಡೆ ವರಮೀಯದಿರ್ದೊಡೆ ಎನಗಿಂದು."

"ಅಯ್ಯಾ, ಕಶ್ಯಪಕುವರ! ನಿನಗಾವ ವರವೇಳ್ಕುಂ
ತಿಳಿಪುದು" ಎಂದೆನಲ್ಕೆ ಅಭವಂ. ಆ ಅಸುರಂ
ಹೆರ್ಮೆಯಿಂ ಕೇಳ್ದನಿಂತು "ಕೈಲಾಸದಧಿಪತಿಯೆ,
ಕೇಳ್ ! ಜಪಿಸಿ ನಿನ್ನಂ, ನಾನಾರ ನೆತ್ತಿಯೊಳ್

ಕೈಯಿರಿಸುವೆನವನಲ್ಲಿ ಭಸ್ಮೀಭೂತನಕ್ಕುಂ
ಅರೆಚಣದೊಳ್ !" ಆಗಳಾ ಅಭವಂ ತನ್ನೊಳಗೆ
ನಗುತ ಹರಸಿ, ವರವಿತ್ತು ಪಿಂತಿರುಗುವನಿತರೊಳ್
ದುರುಳ ರಕ್ಕಸಂ "ಓವೊ ! ತಾಳೆಲೆ, ಜಗದೊಡೆಯ !

ಮೊದಲ್ ನಿನ್ನಯ ಶಿರದಲಿ ಕೈಯಿರಿಸಿ ಪರಿಕಿಸುವೆ
ವರದ ಪ್ರಮೆಯ ನಿಮಿಷದೊಳ್ !" ಎನೆ, ಈಶ್ವರಂ
ತಾನೆ ವರವಿತ್ತಾ ನಿಮಿಷದೊಳ್ ರಕ್ಕಸನಂ
ವಿನಾಶಗೊಳಿಪುದು ತರವಲ್ಲವೆಂದು ಬಗೆದು,

ಆ ಕೂಡಲೇ ಮೈಗರೆದು ಓರ್ವ ಪಾರ್ವನೆನೆ
ವೇಷಂ ಧರಿಸಿ ದೂರ ಪಾಂಥನೊಲ್ ಅಲ್ಲಿಗೈದು
ನಗುನಗುತ ನುಡಿದನಿಂತು "ಅಯ್ಯಾ, ಅಸುರಪತಿ !
ಇಂತಾತುರವೇಕೆ ? ಶಿವನ ವರವೆನೆ ಧರೆಯೊಳ್

## ವೃಕಾಸುರ

ಜೊಂತಿ ಪಾತ್ರೆ ? ನಿನ್ನಂಥ ಧೀರಪಟು ಇದ
ನೆಚ್ಚುವರೆ? ತೆಗೆ, ತೆಗೆ ಪರಿಹಾಸ್ಯಮಿದು ಕಣಾ !”
ಅದಕಾರ್ಗೆ ವೃಕಾಸುರಂ ಕಟ್ಟಚ್ಚರಿಯಿಂದಾಳ್ದು
“ಅಹಃ ಅಂತೆನೆ ಪುಸಿಯೇನಿದು ಪಾರ್ವ?” ಎಂದಂ.

“ಎಲೆ, ಅಸುರರೊಡೆಯ ! ಎಂದಾದೊಡಂ ಪಾರ್ವರುಂ
ಪುಸಿಯನಾಡುವರೆ ಈ ಲೋಕದೊಳ್ ? ನೀನಿದಂ
ಪರಿಕಿಸಲ್ಕೆ ಈಗಲೇ ಅಭವನಂ ಮನದೊಳ್
ನೆನೆದು ನಿನ್ನ ತಲೆಯನೆ ಮುಟ್ಟಿನೋಡಿದರಾಯ್ತು !”

ಅಂತೆನಲ್ ಪಾರ್ವಂ, ಚಣದೊಳ್ ಶಿವಮಾಯೆಯಲಿ
ಸೆರೆಸಿಲ್ಕಿ ಅಸುರಪತಿ ಆವೇಶದಿಂದುರ್ಬಿ
ಶಿವನಂ ನೆನೆದು ತನ್ನ ತಲೆಯ ತಾಂ ಮುಟ್ಟಿದಂ !
ಮತ್ತೆ ಪೇಳಲೇನ್ ? ವರಗತ ಹಸ್ತಸ್ಪರ್ಶದಿಂ
ಅಸುರಂ ಭಸ್ಮಾವಶಿಷ್ಟಂ !

* ಮಂಜೇಶ್ವರ ಗೋವಿಂದ ಪೈಯವರಿಗೆ ಋಣಿ

—:o:—

## O Henry

ಅಮೆರಿಕೆಯ ಸಾಹಿತ್ಯ ಜಗದಿ
ಅಂದು ಪ್ರಖ್ಯಾತನಾಮನಿರ್ದಾ
ಓ ಹೆನ್ರಿ ವನಗಾಹಿತನದಿಂ
ತನ್ನಯ ಜೀವನವನಾರ್ಕೈದಂ.

—:o:—

# ಬಾಳಿರೆಲ್ಲ ನಿಜ ಭಾವೈಕ್ಯದಲಿ

ಮೂಡಿತು ಭವ್ಯ ಬಾನಿನ ನೀಲಿಯಲಿ
ನಾಡಿನ ಸಿರಿಸೌಭಾಗ್ಯದ ರೀತಿಯಲಿ
ಶಾಂತ ಶೀತಲ ಸುಧಾ ಕಾಂತಿಯಲಿ

ಉದಯ ರವಿಯ ಪ್ರೋಜ್ವಲ ಬಿಂಬ
ಜಗಜ್ಜೀವನಕೆ ತಂದಿತು ದಿವ್ಯಾನಂದ
ಜಡ ನಿದ್ದೆಗೆ ನಂದಿತು ಘನಘೋರ ಬಂಧ

ಜೀವನ ಪಟುಗಳೇ ನೀವ್ ಎದ್ದೇಳಿ !
ಧರ್ಮಕರ್ಮದ ಸಂದೇಶವ ಕೇಳಿ
ನಿತ್ಯನೂತನ ನೇಮದೈಸಿರಿ ತಾಳಿ

ಜಡಬಾಳಿನ ಕತ್ತಲೆಯನು ಕಳೆದು
ಹೊಸ ಬಾಳಿನ ರಥವಿಂಣಿಯನು ಎಳೆದು
ನೀವ್ ಒಂದಾಗಿ ಸಾಗಿರಿ ಎಂದೂ.

ಅತಿ ಸಂತಾನದ ಪಿಡುಗನು ತೊಡೆದು
ಜಡ ಜೀವನದ ಮುಸುಕನು ಹರಿದು
ಹೊಸಬಾಳಿನ ಸಿರಿ ಸೌಖ್ಯವ ಪಡೆದು

ರಾಷ್ಟ್ರ ಕಲ್ಯಾಣದ ನೇಮದಿಂದಲಿ
ಸಂಜೀವನ ಸುಂದರ ವ್ಯಾಪ್ತಿಯಲಿ
ಬಾಳಿರೆಲ್ಲ ನಿಜ ಭಾವೈಕ್ಯದಲಿ

—:o:—

# Jean Paul Satre

ಸೆ ಸಾವಿರದೊಂಬೈನೂರೈದನೆಯಾ
ಇಸವಿಯ ಸುಂದರ ದಿನದೊಳ್
ದೂರ ಫ್ರಾನ್ಸ್ ಭುವಿಯ
ಪುಣ್ಯ ತಲದಲಿ ತಾಂ ಸಂಜನಿಸಿ
ನಲವಿಂ ಆಡಿ ಪಾಡಿ ಮುಂಬೆಳೆದು
ಸಾಹಿತ್ಯ ಕ್ಷೇತ್ರಮಂ ಪುಷ್ಟೀಕರಿಸಿ
ಲೋಕೋತ್ತರ ಸೇವೆ ಸಲ್ಲಿಸಿದಾ
ಮಹಾಶಯ

Jean Paul Satre !
ಲೋಕದೊಳ್
ಸುಪ್ರತಿಷ್ಠಿತರ್ ಪೆರ್ಮೆಯಿಂ
ಆನಂದದಿಂ ಮನೋಲ್ಲಾಸದಿಂ
Nobel ಪಾರಿತೋಷಕಮಂ
ಪ್ರಾಂಜಲಿಯೊಡ್ಡಿ ಸ್ವೀಕರಿಸಿದೊಡೆ
ಸಾತ್ರೆಮಹನೀಯನದಂ
ಅಸ್ವೀಕರಿಸಿ ಲೋಕ ಪ್ರಸಿದ್ಧಿ ಪಡೆದು
ಅಭ್ಯುದಯ ಸಾಧಿಸಿದಂ !
ಗಣತಂತ್ರದಲಿ
ವ್ಯಕ್ತಿ ಸ್ವಾತಂತ್ರ್ಯಮಂ
ಹೃತ್ಪೂರ್ವಕವಾಗಿ–ಪುನಃಪೂರ್ವಕವಾಗಿ
ಪ್ರತಿಪಾದಿಸಿ ರಣಪಂಡಿತರ
ವಿನಾಶಕೇಳಿಯಂ
ಖಂಡಿಸಿ-ತಿರಸ್ಕರಿಸಿ ಅವರೆಲ್ಲರಾ
ಪ್ರಕೋಪಕ್ಕೆ ಸುಪಾತ್ರನಾದೊಡಂ,
ದೇಶದ್ರೋಹಿ ಎಂದೆನುತ ಸ್ವಜನರೇ
ಎದುರುಬಿದ್ದು

ನೆರೆ ಖಂಡಿಸಿ ವಾಗ್ಪ್ರಾಣ ಬಿಟ್ಟೊಡಂ
ಲೆಕ್ಕಿಸದೆ ಮಣಿಯದೆ ಹಿಂಜರಿಯದೆ
ತನ್ನ ತನವಂ ಆರ್ಜಿಸಿದ
ಘನವಂತ
Jean Paul Satre !
ಫ್ರೆಂಚ್ ಸಾಹಿತ್ಯ ಕ್ಷೇತ್ರದಲಿ ಸೀಮಾ
ಪುರುಷನಾಗಿ
ಜಗ ಬೆಳಕಿನಲಿ ತಾಂ ಮಿಂಚಿದೊಡಂ
ಶ್ರೀ ಸಾಮಾನ್ಯರಾ
ಜೀವನ ಸ್ವಾತಂತ್ರ್ಯವಂ ಮೇಣ್
ಕಾರ್ಯಕಾರಣ ಸ್ವಾತಂತ್ರ್ಯವಂ
ಎಂದುಮೆಂದಿಗೂ
ಮೊಟಕುಗೊಳಿಸಲಾಸಲ್ಲವೆಂಬ
ತತ್ವವಂ ಪ್ರತಿಪಾದಿಸಿದ ವ್ಯಕ್ತಿ
Jean Paul Satre !
ಅಮೇರಿಕೆಯ ಗೌರವ ಕರೆಯಂ
ಅವರ ರಣ ಪಾಂಡಿತ್ಯಕ್ಕೆಂದೇ ತಿರಸ್ಕರಿಸಿ
ಅಖಿಲ ಜಡಮತಿಗಳ ಕಣ್ತೆರೆಸಿ
ನೊಂದವರ, ದುಃಖಿಗಳ
ಕಂಬನಿಯ ಕೋಡಿಯಂ ದಯೆಯಿಂ ತೊಡೆದ
ರಚನಕಾರ
ಸಾವಿರದೊಂಭೈನೂರೆಂಭತ್ತೊಂದರ
ಮಾರ್ಚಿಯಲಿ
ವಿಧಿಯೊಗೆದ ಪಾಶಕೆ ಸಿಕ್ಕಿ ಇಹಲೋಕವಂ
ತ್ಯಜಿಸಿ ಅಮರನಾದೊಡಂ
ತನ್ನ ಪೆಸರಂ ಸಾಹಿತ್ಯ ಜಗದಗಲ
ಸುವರ್ಣಾಕ್ಷರಗಳಲಿ ಬರೆಸಿದ
ಲೋಕಮಾನ್ಯ
Jean Paul Satre !

# ಮನವಿ

ಓ ತ್ರಿಲೋಕ ಶಾಸಕ ಉಜ್ವಲೋಜ್ವಲ ವಿಭೂಷೆ !
ಇದೇಂ ಕಿಂಚಿತ್ ತಂಗದ ತವ ಜಗತ್ ಪರ್ಯಟನೆ ?
ನಸು ಹಿಂಚಿದೊಡೆ ನಷ್ಟವೇನಯ್ಯ ದಿನಮಣಿಯೆ ?

ಹೇ ಸರ್ವಜನ ಪೂಜಿತ, ಎನ್ನ ದೇವರ ದೇವ !
ಇಂತು ಆತುರ ಕಾತರದ ಮುನ್ನಡೆ ಸಾಲ್ಗುಂ!
ತುಸು ತಳ್ವಿ ಹಿನ್ನೋಡಿ ಮುನ್ನಡೆಯೊ ಮಾಪುರುಷ !

ಹಿಂದುಳಿದರ ದುರ್ಬಲರ ಅವಜ್ಞರ ನಿರಾಲ
ನಿರ್ಲಜ್ಜ ನಿರ್ಯೋಜನೆಯು ಜಾಕ್ರೆ ಗತಿಯೇಸ್ತೈ
ನೀನಿಂತು ನಿರ್ಲಕ್ಷಿಸಿ ಮುನ್ನಡೆದೊಡೆ ಪೇಳ್.

ನಿನ್ನವೋಲ್ ತಳ್ವದೆ ಜಡಪಡಿಸದೆ ಮುಗ್ಗದೆ
ಮುಗ್ಗರಿಸದೆ ಈ ಜಡ ಚೇತನಗಳ್ ಪಯಣಿಸ
ಬಲ್ಲುವೇಂ ಜಗತ್ ಪಥದಲಿ ಹೇ ಜಗ ಚಕ್ಷುವೆ !

ಬೆಳಗಿನ ತವತೀಕ್ಷ್ಣರಹಿತ ಪ್ರಭೆ ಮನ ಸೆಳೆಯೆ
ಕಣ್ಮುಗಿದು ಶ್ರೀಧ್ಯಾನದಲಿ ಮೈಮರೆತಿರಲಾಂ
ನೀನಪೆ ಚಣದೊಳ್ ಏರಿದೆಯಲ್ಲೊ ನಭದೆಡೆಗೆ !

ಕಣ್ತೆರೆದು ನೋಡೆ, ಮನಮಿಡುಕಿ ಜೀವ ಒಡಲೊಳ್
ಕೊರಗಿ ಕರಗಿ ನಾಣ್ಚಿ ನಲುಗಿ ನಡುಗಿ ಸಯ್ತೆನಾಂ
ಸಮಾಧಿಗೆ ಬದುಕಿನ ಮಂದ್ರಗತಿಯುಂ ನೆನೆನೆನೆದು.

## ಮ ನ ವಿ

ನಸುಪೊಳ್ತು ನಿಲ್ಲಯ್ಯ, ನಿಲ್ಲು ? ನಮ್ಮೆಲ್ಲರ
ಸಂಕಷ್ಟವನಿನಿತರಿಪೊಡೆ ಹಿನ್ನೋಡದೆಂತ್ರೈ
ತವ ಮಾರ್ಗದರ್ಶನಂ ಹೇ ! ತ್ರಿಕಾಲ ಪುರುಷ !

ಎನ್ನ ಕಾರ್ಯಕಾರಣ ಸ್ಥಗಿತಪ್ಪೆ ಪರಿಸರದ
ದುರುಳ ಕಂಟಕರಿಂದೆ ! ಮುನ್ನಡೆವೆನೆ ಹೆಜ್ಜೆ
ಹಿಂದೆಳೆದು ಗೋಳುಗುಡಿಸುತಿರ್ಪರ್ ಬೆಂಬಿಡಿದು.

ಅಯ್ಯಾ, ಜಗದೀಶನೆ, ನಿಚ್ಚ ಮಾರ್ಗದರ್ಶಿಯೆ !
ಆನಿನ್ನ ನಿದ್ದ ತಿಳಿದು ತಪ್ಪು ತಪ್ಪು ಹೆಜ್ಜೆ
ಇಡುತಿರುವೆ ; ಇನ್ನೆವರಂ ಅರಿತು ಕಲಿತೆನಿಲ್ಲಂ.

ಎನ್ನ ಪಾಲಿನ ಕರ್ತವ್ಯವಿನ್ನು ಮುಗಿಯಲಿಲ್ಲಂ.
ಆನೆಲ್ಲ ಮುಗಿಸಲಾರೆನೆನೆ ಸಂಕೋಚವಿಲ್ಲ
ಅಮಾಯಕತೆ—ಅಬಲತೆ—ಅಧೀರತೆ—ಅಜ್ಞಾನ

ಇತಿ ಮನದೊಳ್ ಒಗ್ಗೂಡಿ ಮುಂಬೆಳೆದಿರಲ್ ಆಂ
ಎಂತು ನಿನ್ನ ಪಥವಿಡಿದು ಸಾಗಲು ಸಾಧ್ಯಪ್ಪೈ ?
ಧಾತೃ ಮೇಣ್ ಕರ್ತೃತ್ವದಿಂ ನೀಂ ಪಾನಿಸೆಲ್ಲೈ !

ದಯಮಾಡಿ ಕರುಣೆ ತುಂಬಿ ಮನದಲಿ ಕೆಲಜಣಂ
ತಂಗಲಾರೆಯಾ ಆಂ ಬೆಂಬಿಡಿವನ್ನಂ ನಿನ್ನ
ಓ ಎನ್ನಯ್ಯ ಪರಮಪ್ರಭು ಜಗತ್ ಶಿರೋಮಣಿ !

—:o:—

# ಹರಕೆ

ಬೆಟ್ಟದಾಣದಲಿ ಹಚ್ಚ ಹಸುರಾಗು ನಿಚ್ಚ ;
ಹುಲ್ಲಾಗು ಹೂವಾಗು ಬಟ್ಟಬಯಲಲಿ ;
ಅಂಗಣದಲಿ ಘಮಘಮಿಪ ಅರಸು ಮಲ್ಲಿಗೆಯಾಗು ;
ಮನೆಗೆ ಅಕ್ಕರೆಯುಕ್ಕಿಸುವ ಮುದ್ದು ಮಗುವಾಗು ;

ಹೆತ್ತವರಿಗೆ ಸುಖಾಶ್ರಯವಾಗು ವೃದ್ಧಾಪ್ಯದಲಿ ;
ಹಾಲ್ಸಕ್ಕರೆಯಾಗು ದೀನ ದುಃಖಿಗಳಿಗೆ ;
ಅಬಲೆಯರಿಗೆ ನಿತ್ಯ ಆಪದ್ಬಾಂಧವನಾಗು ;
ನೆಚ್ಚಿನ ವೀರಪುತ್ರನಾಗು ತಾಯ್ನಾಡಿಗೆ ;

ಎಂದೆಂದೂ ಪ್ರಾಣಿದಯಾಶೀಲನಾಗು ;
ಕರ್ಮಕುಶಲಿಯಾಗು ಜೀವನದೇಳ್ಗೆಗೆ ;
ನಂಜಾಗು ಮಿತ್ತಾಗು ಸಾಮಾಜಿಕ ಕ್ಲೈಬ್ಯಕೆ ;
ಸೊತ್ತಾಗು ತೊತ್ತಾಗು ಧರ್ಮನೀತಿಗಳಿಂಗೆ.

—:o:—

# ಮೌನ

ಅಜ್ಞಾನಮಂ ತೋರಗೊಡದಿರೆ
ಮೌನವೆಂಬ ಸುಖಾಸ್ತ್ರಮಂ
ವರ ಪ್ರಧಾನ ಮಾಡಿಹ ಪರಬ್ರಹ್ಮ !
ಘನ ಪಂಡಿತರ ಸಭೆಯೊಳ್

ಪಾಂಡಿತ್ಯವಿಲ್ಲದಿಹ ವ್ಯಕ್ತಿ ತಾಂ
ಸುಶೋಭಿಪುದು ಮೌನದಿಂ ಕಣ !

—:o:—

# ನನ್ನೆದೆಯ ಬಾಂದಳದಲ್ಲಿ

ನನ್ನೆದೆಯ ಬಾಂದಳದಲ್ಲಿ
  ಉಜ್ವಲ ರವಿ ನೀನಿರಲ್ಕೆ
ಹೆಜ್ಜೆ ತಪ್ಪಿದರೂ ಭಯವಿಲ್ಲ.
  ಗಾಢಾಂಧಕಾರ ತುಂಬಿದ
ಈ ಜೀವನ ಯಾತ್ರೆಯ
  ಹೊಣೆಯೇ ನಿನ್ನದಾಗಿರೆ
ನನಗೆಲ್ಲಿಯ ಶೋಕ ಚಿಂತೆಗಳ್ ?
  ಸೂತ್ರದಾರಿಯು ನೀನೇ
ದೀಪದಾರಿಯು ನೀನೇ
  ಮಾರ್ಗ ಸೂಚಿಯೂ ನೀನೇ
ಇನ್ನುಮೆನ್ನ ಮುಂದಮುತಿಗೆ
  ಚಿರ ನಂಬುಗೆಯೊಂದೇ
ನಿಚ್ಚ ನಡೆಯ ಮುಂಪಥಕೆ
  ನಡೆಸುವನ್ನೆಗಂ ಕಬ್ಬ ಕನ್ನೆಯಂ

—:o:—

# ಸ್ವಾರಸ್ಯ

ಗಂಡಾಂತರವಿಲ್ಲದಿರೆ
ಜೀವನ ನಾಟಕದಲಿ
ಸ್ವಾರಸ್ಯವಿಲ್ಲಕಣಾ !

# ನೀಲಗಿರಿ

ನೀಲಗಿರಿ, ಓ ನೀಲಗಿರಿ ! ಪಚ್ಚಪಟ್ಟುಡೆಯ
ತ್ರಸ್ತಾಂಗಿಯೆನೆ ನಳನಳಿಪ ಸುಂದರಿಯಲ್ತೇ
ನೀಂ ಸಸ್ಯಲೋಕದ ಮಹಾ ಸಚ್ಛಾರ್ದಿಯಲಿ ?
ನಿನ್ನ ಹುಟ್ಟುವಳಿಯ ಸೊಬಗುಸಿರಿ ರಸದೃಷ್ಟಿಗೆ
ನಿತ್ಯ ಪರರಸನೆಯ ಮಹದೌತಣ ಮಾತ್ರಮಲ್ತು
ರೋಗ ರುಜಿನಗಳಿಂಗೆ ಉತ್ತಮೌಷಧಿಯಾಗರಂ !
ನಿನ್ನ ಮೆಯ್ಯ ನರಗಂಪು ಆಘ್ರಾಣಿಸಲೆಸಿತು
ಮಧುರಾತಿಮಧುರ ರಸನಿಧಿ ಹೃತ್ ಸಂಪುಟಕೆ !
ಕಾಲಾನುಕಾಲದಿಂ ಎನಿತೆನಿತು ಜನ ನಿನ್ನ
ದೇಹಸಾರವಂ ಹೀರ್ದು ರೋಗವಶದಿಂ ಪುಟಿದು
ಪಾರಾಗಿ ಬಾಳ್ತುಂಬಿ ಜೀವನದೊಳ್ ಯಶವಂ
ಸಾಧಿಸಿದರೋ ಕಾಂಬರಾರ್ ಹೆ, ನೀಲಗಿರಿಯೇ !
ನಿನ್ನ ಗಗನ ಚುಂಬೀ ಧೀರ ಗಂಭೀರ ನಿಲುವು
ಧವಳಿಮಾ ಕೀರುತಿಯುಡಿಗೆಯ ಮನಮೋಹಕತೆ
ಮಾರುತನ ಚಾಮರೀಸೇವೆಗೆ ಮುದದಿಂದಲಿ
ನೀನೂಡುವ ಎಲೆಗಳ ಮರ್ಮರ ಶೃತಿಲೀಲೆ
ಎನಿತಂದವೊ ಮಾನಸ ರಸಾಬ್ಧಿಯ ಮಂಥನಕೆ !
ನೀಂ ಲೋಕ ಹಿತೈಷಿಯಾದೊಡೇಂ ಹೇ ಧ್ರುಮರಾಜ!
ನೀನಿದ್ದೆಡೆ ಭೂಸಾರವಂ ಹೀರ್ವ ಜಲಧಿಯ
ಕಣಕಣವಾಸ್ವಾದಿಪೆ ಎಂಬುದೊ ಕೃಷಿ ವಿಜ್ಞಾನ !
ನೀನಿದ್ದೆಡೆ ಇತರ ಬೆಳೆಯಿರದೆನಲ್ ಭುವಿಯಲಿ
ಏಕಿಂತು ಅನ್ಯಾಯವೆಸಗಿಪೆ ನಿನ್ನ ವಂಶಕೆ ?
ನವಿರ್ರಾ ಬಡತನದ ಬೇಗೆಗಿನಿತು ಕಿಚ್ಚಿಡಲೆಂದು
ನೀನೈತಂದೆಯೋನೈ ಈ ಸುಂದರ ನಾಡಿಗೆ
ನೀಲಗಿರಿ, ಓ ನೀಲಗಿರಿ !

—:o:—

## ಓ ಎನ್ನ ಸಿರಿದೊರೆಯೆ !

ಆರಾರಿಂ ತಿಳಿಯಲಿ
ನಿನ್ನಯ ನಿಜರೂಪವ
ಓ ಎನ್ನ ಸಿರಿದೊರೆಯೆ !

ಎನಿತೆನಿತು ಪ್ರಯತ್ನಿಸಿದರೂ
ನಿನ್ನಿರವನು ತಿಳಿಯಲರಿಯೆ
ನಿನ್ನ ರೂಪು ಕಾಣಲರಿಯೆ
ನಿನ್ನ ಸೇವೆ ಮಾಡಲರಿಯೆ
ಓ ಎನ್ನ ಸಿರಿದೊರೆಯೆ !

ಕೆಲರೆಂಬರ್ ನೀಂ ಆನಂದನೆಂದು
ಕೆಲರೆಂಬರ್ ನೀಂ ಬ್ರಹ್ಮಾಂಡನೆಂದು
ಕೆಲರೆಂಬರ್ ನೀಂ ಕೋಮಲನೆಂದು
ಕೆಲರೆಂಬರ್ ನೀಂ ಕಠೋರನೆಂದು
ಆನೆಂತು ಅರ್ಥೈಸಲಿ ದೇವ ?

ದಯೆಗೈದು ನೀನೇ ನಿನ್ನಯ
ದರುಶನವ ನೀಡಿ ಪರಿಹರಿಸೈ
ಎನ್ನಯ ಮನದ ಶಂಕೆಯನು
ಓ ಎನ್ನ ಸಿರಿದೊರೆಯೆ !

—:o:—

## ಐಷಾರಾಮ

ಯುದ್ಧದಿಂದೊದವಿದ ಹಾಳಿಗಿಂತಲೂ
ಕಡಿಮೆಯುಳ್ಳವೋ ಐಷಾರಾಮದ ಹಾಳು !

—:o:—

# ಮನೆವಾಳ್ತೆ

ಪೂರ್ವಕರ್ಮವಿಪಾಕ ಒತ್ತಿಯೊತ್ತಿ ಬರುತಿರೆ
ಕಟ್ಟಲಳವೇ ಭದ್ರಭವಿಷ್ಯದರಮನೆಯಂ ?
ಎನಿತೆನಿತು ಕಾವರಂ ಬೇಡಿ ಇನ್ನೆನಿತೆನಿತು
ಪಗಲ್‌ಗನಸಂ ಕೋದು ಪೂಡಿದೆನೀ ಸಂಜೀವನಂ !

ದೇವ ! ಎನ್ನ ದೀನ ಮೊರೆಯಂ ನೀಂ ಕೇಳಿಯುಂ
ಇಂತೀವೊಂದು ಸಂಸ್ಕೃತಿವೆಸರ ಭವಾಬ್ಧಿಯಲಿ
ಹೊನ್ನ ಹೊಳಪಿನ ಖಡ್ಗದಲುಗಿನಾಶ್ರಯದಲಿ
ಮನೆಯಿತ್ತೆ ಸಲ್ಲದಾ ಮನೆವಾಳ್ತೆಯಲಿ ಕಣಾ !

ಕೂಡಿದ ನಿಡುಗೋಂಟೆಯಲಿ ಕರ್ಮ ಸವೆಯದಿನ್ನು
ನೊಂದು ನರಳ್ದು ಗಾಸಿವಡುತಿರೆ ನೋಡುತಿಂತು
ಸುಮ್ಮನಿರ್ಪರೇಂ ? ಎಂತು ಸಹಿಸಲೀ ಭವ ಬನ್ನ ?
ನೋಯಲಾರೆ ನೆಯ್ಯಲಾರೆ ಮುಡಿಯಿಡುವೆ ನಿನ್ನಡಿಗೆ.

ಆನೆವಾಗಿಲ ಮಿಸುನಿ ಕ್ಕೆಯಿನಿತು ತೆರವೀಯ
ಲುಂಟೇಂ ಈ ಜನ್ಮದೊಳ್ ? ಪ್ರಕಾಂಡ ಕಾಂಡವ
ಬೇನೆಯಲಿ ಸೆರೆಸಿಲ್ಕಿ ತತ್ತರಿಸಿ ದಿಕ್ಕೆಟ್ಟು
ಪೋಹ ಪವಗತಿಗಿಂ ಮಿಗಿಲಲ್ತೆ ನಿಜ ಮರಣಂ ?

ಭಾರತ ಸಂಸ್ಕೃತಿಗೆಣೆಯಿಲ್ಲವೆಂದೊಡಿದೇತರ
ಸಂಕಟ ತೆರೆಮರೆಯಲಿ ನೋಡಾ ! ವೇದಕಾಲದಿಂ
ಬಾಳ್ವಾ ಸುಸಂಸ್ಕೃತಿವಾಹಿನಿಯೊಳ್ ಮಕರಂ
ನೆಲೆಗೊಂಡಿರೆ ಕುಸಂಸ್ಕಾರಮು ಸಂಸ್ಕಾರಂ ಕಣಾ !

# ಮನೆಪಾಳ್ತಿ

ರಾಷ್ಟ್ರದಾ ದಾಸ್ಯಮಂ ತೊಡೆಯಲ್ಕೆ ಕೆಚ್ಚಿನಿಂ
ಪುರ್ಚಿನಿಂ ನುಗ್ಗಿದ ನಾರೀಮಣಿಗಳ ಪಾತ್ರಮಂ
ಇಂದಳೆಯಲಕ್ಕುಮೆ ? ಸತ್ಯ-ಧರ್ಮ-ಶಾಂತಿ-ಶಿಸ್ತು
ಮೇಣ್ ಸ್ಫೂರ್ತಿಗಳ ಪ್ರತೀಕಮಲ್ತೆ ಭಾರತಿ ?

ದಿಶೆದಿಶೆಯೊಳ್ ಸರಸತಿ ಮಂದಿರಂ ನೆಲೆಗೊಂಡು
ನಿಚ್ಚಂ ಸರಸತಿಯ ಪೂಜೆಯೊಳ್ ತೀರ್ಥ ಪ್ರಸಾದಂ
ಪಡೆಕೊಂಡೊಡಂ ಸಲ್ಲುವೆ ವರದಲಿ ಸಮಫಾಲ್
ಈ ಬರ್ದುಕಿನೊಳೆಂದಿಗೂ ಇಲ್ಲಂ ಎನ್ನೊಡೆಯ !

ವಿದ್ಯೆಬುದ್ಧಿಗಳಿದ್ದು ಸ್ವಂತಿಕೆಯಿರದ ಮೇಲೆ
ಬಾಳೇಕೆ ? ಬದುಕೇಕೆ ? ನಿಚ್ಚಂ ಪರಿದಾಡುವ
ಕಟ್ಟುಸಿರ್ ನಿಷ್ಪ್ರಯೋಜನಮಲ್ತೆ ? ಏಗಳುಂ
ಕಾಮೋತ್ಪನ್ನ ದರ್ಪದ ಸೆರಳ್ ಸಲ್ಲ ಸತಿಗೆ ಕಣ !

ಬಾಳ್ಗಿಟ್ಟು ನರಳುತಿರೆ ಜೀವ ಪರಗತಿಗೆ ಪ್ರೋಚ್ಚ
ಪರಮೋಚ್ಚ ಪಥಂ ಪುಡುಕಲಾಗದೆ ನಡೆಪೆಣದೊಲ್
ನಡೆದು ಬಾಳ್ ಗರಡಿಯ ಮಸಣದಲಿ ಅಂಡಲೆದು
ಕತ್ತಲೆಯ ಬಂಡೆಯುಂ ಪಾಯ್ದೊಡೆ ಏನಪ್ಪುದು ಗಡ !

ಬಿರುಗಾಳಿ ಬೀಸಿ ಭೀಮಿಸುತಿರೆ ಮರಗಿಡಗಳ್
ಬೀಳದಿರ್ಪವೆ ಬೇರುಡಿದು ? ಆವ ಸಂಸ್ಕೃತಿಯೊ
ಇನ್ನಾವ ಧರ್ಮಪ್ರೇರಣೆಯೊ ನವಕಲೆಗಳುಂ
ರಕ್ತಗತಮಪ್ಪುಲಡುವೆ ಜೀವನಸ್ಫೂರ್ತಿ ಕಣ !

ಕರಕುಶಲತೆ ಕಾರ್ಯಕುಶಲತೆಗಳ್ ಒಗ್ಗೂಡಿ
ಮೂಡಿಸೆ ವರ ಕುಶಲಕಲೆಯೊಳ್ ವರ್ಣರಂಜಿತ
ಚೆಂಕೃತಿಯುಂ ಹತ್ತಾಗಿ ಹಲವಾಗಿ ಆದೊಡೇಂ ?
ಮಾಯದಾ ಹುಣ್ಣಿನಲಿ ಮೂಡಿತೆ ಹೊಸಗಾಯಂ !

## ಮನೆವಾಳ್ತೆ

ಬಾಳ್ಗೊಂಟಿಯೊಳ್ ಹುದುಗಿ ಎಂಗೈದೊಡೇನೊಡೆಯ ?
ನೋಡಿ ಸೈಪರಿಲ್ಲ. ಅಹುದೆಂಬರಿಲ್ಲ. ತಣ್ಣನೆ
ತನಿಯೆರೆದು ಪರಿಪ್ರೋಷಿಸುವರಿಲ್ಲ. ಸರ್ವತ್ರ
ಈ ಬಾಳ್ ಬರ್ದುಕು ಅರ್ಥಹೀನ ವ್ಯರ್ಥ ಕಣ !

ನೋಡಿ ಬೇಸತ್ತುವೆನೆ ಸಂಪೂಡುತಿರೆ ಕಣ್ಣು
ಸಂಪ್ಲವಿಸಿದಾ ಕರಕಲಾಸಿಧಿ ತಾಂ ಗಾರ್ಬೈಸೆ
ಏಕತಾನದ ಮುನ್ನಡೆಯ ರಥಗಾಲಿಗೆ ಸಿಲ್ಕಿ
ಆತ್ಮಶಾಂತಿಯು ಧಗಧಗಿಪ ಸುಡುಬೆಂಕೆ ಒಡೆಯ !

ಹೊರಗೆ ಕತ್ತುರಿಯ ಕಂಪು ; ಒಳಗೆ ಹೊಟ್ಟೆನ ಕಿಚ್ಚು ;
ಬೇಡವೀಕರ್ಮಕಾಂಡವಿತ್ತಖಿಲ ಭಂಗಂ !
ಖತಿಯ ಕಡಲಲಿ ತಡುಕಿದರೆ ತುತ್ತೆ ದಿನಗೂಳು!
ಭವಸಾಗರವಿದು ಸುಡುಗಾಡಿನಾಪೂಡು ಕಣ !

ಕೇಳೆನ್ನರಸ ! ಇನ್ನು ದಣಿಸೆ ನಿನ್ನ ನಾನು
ಈ ಬೆಂಗಾಡಿನಜ್ಞಾತ ಕತೆಯಂ ಮುಂದರಿಸಿ
ಕೈಜೋಡಿಸಿ ಬೇಡುವೆ ಕರುಣದಿಂ ಬಲಿಸುವೊಡೆ
ನೀ ಬಲಿಸು ಮುಳುಗಿಸುವೊಡೆ ಮುಳುಗಿಸು ಕವಯಿತ್ರಿಯಂ !

—:o:—

## ಜಾತಿ

ಅಂಬರವೊಂದೇ ಭೂಮಿಯೊಂದೇ
ಬೀಸುಗಾಳಿಯೊಂದೇ ಹರಿವ ನೀರೊಂದೇ
ಒಂದೇ ಧಾನ್ಯಮುಣುತೊಂದೇ
ಸಂಸ್ಕೃತಿಯಲಿ ಬೆಳೆದುಬಂದ
ನರಮನುಜರೊಳತೀವ ಜಾತಿ
ವೈವಿಧ್ಯತೆ ಎಲ್ಲಿಂದ ಬಂತೈ ಸ್ವಾಮಿ ?

—:o:—

# ಶರಣಾರ್ತಿ

ಶರಣಾರ್ತಿ   ಶರಣಾರ್ತಿ   ಶರಣಾರ್ತಿ
ಓ ಎನ್ನ ಮನದನ್ನ ನಿನಗೆ ಶರಣಾರ್ತಿ

ನಿನ್ನಿರುವನರಿಯಲೆಂದು ವನವನವನಲೆದು
ಗಿರಿ ಕಂದರಗಳ ಸುತ್ತಿ ಹೊಳೆತೊರೆಯ ದಾಂಟಿ
ನಿನ್ನ ಕಾಣದೆಲ್ಲು ತೊಳಲಿದೆನೊ ಶ್ರೀ ವಲ್ಲಭ !

ಗುಡಿಯಲಿರುವೆ ನೀನೆಂದು ಗಡಿಗೆ ಹಾಲ ತಂದು
ಎನ್ನೊಡೆಯ ನಿನ್ನಡಿಯ ಸೇವೆಯ ಮಾಡಲೆಂದು
ಎಡೆಬಿಡದೆ ಬೇಡುತಿಹೆ ಬಾಳ ತೊರೆದುಬಂದು

ನೀರೆ ನಿನ್ನ ನಾನಂಬಿ ವರಪೂಜೆಗೆಂದು ಫಲ
ಪುಷ್ಪವ ತರಿದು ತಂದು ಕಾದಿರುವೆ ನಿನಗೆಂದು
ಹೇ ವಸುದೇವ ನಂದನ ಪತಿತ ಜನ ಪಾವನ !

—:o:—

# ನಿ ರಾ ಶೆ

ಎಂದೂ ಯಾರಿಂದಲೂ
    ಏನನ್ನೂ ನಿರೀಕ್ಷಿಸದ
ಮನುಜನಿಗಿಂ ಪೆರ್ಚಿನ
    ಸುದೈವಿ ಆರೂ ಇಲ್ಲ ಜಗದಿ.
ಜೀವನದಲಿ ಅವನೆಂದೂ
    ನಿರಾಶೆಗೀಡಾಗನೈ ಮಿತ್ರ !

—:o:—

# ಕೊಯ್ನಾ*

ನಡುಗಿದೆ ! ಗಡಗಡ ನಡುಗಿದೆ
ಏಕೆಲೆ ತಾಯೀ ಭಾರತೀ ?
ನೀಂ ನಡುನಡುಗಿ ಅಬ್ಬರಿಸಿ ಬಾಯ್ಬಿಟ್ಟು
ನಿನ್ನವರ ನೀನೇ ನುಂಗಿ
ನೊಣೆದೊಡೆ ಕಾಯ್ವರಾರ್ ತಾಯೆ !
ನಿನ್ನ ಮಕ್ಕಳ ಹೀನ ಚರಿತ್ರೆ
ಹೇಸುಬುದ್ಧಿಯು ದುಷ್ಟತನ
ಕ್ರೂರ ಪಾತಕಗಳ್
ಸ್ತ್ರೀ ಶೋಷಣೆ
ಬಡಬಗ್ಗರ ಸುಲಿಗೆ-ಹಿಂಸೆ
ಅವಿದ್ಯೆ-ಅಜ್ಞಾನ-ಅವಜ್ಞೆಗಳ್
ಭಾರತೀಯತ್ವಕ್ಕೆ ಕಳಂಕವೆಸಗಿ
ನಿನಗಪಮಾನಗೈದುದರ
ವಿರುದ್ಧ ಸಿಡಿದುದೇಂ ತವ ಕೋಪಶಿಖಿ ?
ಒಳಗೊಳಗೆ ಬೇಸತ್ತು
ನೊಂದು ನಲುಗಿ ಕರುಳ ರೋಷವಂ
ಕಾರ್ವವೊಲ್ ಗಡಗಡ ನಡುಗಿ
ಅಬ್ಬರಿಸಿ ಸಿಡಿಲ್ ಘರ್ಜನೆ ಮಾಡಿ
ಬಾಯ್ಬಿಟ್ಟು ಜನಜಾಪತ್ತು
ಆಸ್ತಿ ಮನೆ ಮುಂತಾದುವಂ
ನುಂಗಿ ಕಬಳಿಸಿ ಒಡಲ್‌ಗಿಚ್ಚಿಗೆ
ತನಿಯೆರೆದೆಯಲ್ತೆ ?
ಭಾರತ ಸಂಸ್ಕೃತಿ
ಜಗದಲಿ ಪಿರಿದಾದೊಡಂ
ಈ ಸಾಮಾಜಿಕ ಪ್ರಾಕಾರದಲಿ

## ಕೊಯ್ನಾ

ಸಂಸ್ಕೃತಿ ವಿಕೃತಿಯೈಸಿ ತವ
ಮನಂ ನೊಂದಿರೆ
ಪೇಳಲೇನಕ್ಕು ತಾಯೆ ?
ಆದೊಡಂ ಕೈಮುಗಿದು ಪ್ರಾಂಜಲಿಯೊಡ್ಡಿ
ಬೇಡುವೆ ಇನ್ನೆಂದೂ
ಸಿಡಿದೇಳದಿಂತು ಶಾಂತಳಾಗೈ
ಹೇ ತಾಯೆ ಭಾರತೀ !

11-12-67

—:o—

## ಆಮೋದ

ಗಾಂಧೀ ಪೆಸರಿನಲಿ
ಉಚ್ಚ ತತ್ತ್ವಗಳ
ಉದಾತ್ತ ನೇಮದಲಿ
ರಾಜಕಾರಿಣಿಗಳ್
ಕೈಕೊಳ್ಳುವ ಸಕಲ
ಪ್ರಮಾಣ ವಚನಗಳ್
ಎಂಟಾನೆಂಟು ದಿನಗಳ
ಆಮೋದಕಾಗಿ ಕೇಳ್ !

—:o:—

# ರಂಗ ವಿಠ್ಠಲ

ನಂದಗೋಕುಲಕೆ ಹೋಗಿ ನಾವು
ರಂಗ ವಿಠ್ಠಲನ ಕಂಡು ಬರುವಾ
ಚಂದದಿಂದ ನೀ ಬಾರೆ ಗೆಳತೀ !

ಮೊಲ್ಲೆ ಮೊಗ್ಗುಗಳ ಬಿಡಿಸಿ ತಂದು
ಗುಲ್ಲುಮಾಡದೆ ಹಾರವ ನೆಯ್ದು
ಗೊಲ್ಲರ ಮನೆಯ ಬೆಣ್ಣೆಯನೊಯ್ದು

ನಂದಗೋಕುಲಕೆ ಹೋಗಿ ನಾವು
ರಂಗವಿಠ್ಠಲನ ಕಂಡುಬರುವಾ
ಚಂದದಿಂದ ನೀ ಬಾರೆ ಗೆಳತೀ !

ನಂದಗೋಕುಲದಿ ಮುಂಜೆ ಗೋವುಗಳು
ಬಿಂದಿಗೆ ಹಾಲು ಕರೆಯೆ ಸಿರಿ ವಿಠಲ
ಕಂದರ ಹರುಷದಿಂದ ಕೂಗಿ ಕರೆವ

ನಂದಗೋಕುಲಕೆ ಹೋಗಿ ನಾವು
ರಂಗವಿಠ್ಠಲನ ಕಂಡುಬರುವಾ
ಚಂದದಿಂದ ನೀ ಬಾರೆ ಗೆಳತೀ !

ರಾಧೆಯ ಸೇವಾ ಸವಿ ಇಲ್ಲದೊಡಂ
ರಾಧಾರಮಣ ಎಮ್ಮರ್ಚನೆಯಂ
ಸಾಧುಸಂತರೊಲು ಸ್ವೀಕರಿಸುವಂ

ನಂದಗೋಕುಲಕೆ ಹೋಗಿ ನಾವು
ರಂಗವಿಠ್ಠಲನ ಕಂಡು ಬರುವಾ
ಚಂದದಿಂದ ನೀ ಬಾರೆ ಗೆಳತೀ ?

—:o:—

# ಹೇ ನಂದ ನಂದನ ಜಗನ್ಮೋಹನ

ನೆಚ್ಚಿನಾ ಕೆಟ್ಟೆನೈ ಭವದೀಯ
ಸುಖಶಾಂತಿ ಸ್ಥಿರವೆಂದು
ಕಾಮುಕಾಮುಗಳ ಕೆಳೆತನದಿಂದೆ
ಮೈಮರೆತು ಕಳೆದೆನೈ ; ಇನ್ನೆವರಂ
ನಿನ್ನಿರುವನರಿಯದೆ ಮೈಮನಸಕೊಬ್ಬಿ
ಹೇ ನಂದ ನಂದನ ಜಗನ್ಮೋಹನ !

ಭಂಗ ಬನ್ನಗಳ ಸಿಡುಗೋಂಟೆಯಲಿ
ಸೆರೆಸಿಲ್ಕಿ ಕಾಮನೆಯ ಕಡುಹೀನ
ದರ್ಶನದಿಂ ಕಣ್ದೆರೆದೆನೈ ದೇವ !
ಇನ್ನು ನಾನಿನ್ನಂ ಬಿಡಲುಲೊಲ್ಲೆ
ನೀನೆಂದು ಎನ್ನಕೈ ಬಿಡಲು ಸಲ್ಲ
ಹೇ ನಂದ ನಂದನ ಜಗನ್ಮೋಹನ !

ಪುಟ್ಟಿಸಿದವ ನೀನೇ ಸಂಸಾರ
ಬಂಧನಕೆ ತಳ್ಳಿದವ ನೀನೇ ಎನೆ
ಪಾತ್ರಧಾರಿ ಎಂಗೈವೆನೈ ಪೇಳ್
ಗೊತ್ತುಗುರಿಯಿರದ ಭವಸಾಗರವ
ದಾಂಟಲುಂಟೆ ನಿನ್ನ ನೆರವಿಲ್ಲದೆ
ಹೇ ನಂದ ನಂದನ ಜಗನ್ಮೋಹನ !

— :o: —

# ಅಜ್ಜಿ

ಎಲೆ ಭಗಿನಿ, ನಿನ್ನೆಡೆ ಬೆರಳ್‍ದೋರಿ
ಅಜ್ಜಿ ಎಂಬ ಬಿರುದಂ ನೀಡಿಹರ್
ಭಾರತೀಯ ಸಮಾಜ ಪಿತೃಗಳ್ !

ನೀಂ ಅಜ್ಜಿ ನಿಜ. ನಿನ್ನೊಳ್ ಇಂದಿನ
ರೀತಿ ನೀತಿಗಳಿಲ್ಲ ; ನಯವಿನಯ
ನಾಗರೀಕತೆಗಳಾ ಸೋಂಕಿಲ್ಲ.

ಅದೇ ಜಡತನಂ ; ಅದೇ ಬಡತನಂ ;
ಅದೇ ದುಃಖಕರ ಜೀವನೀಯ
ಪರಂಪರಾನುಗತ ಕಟು ಸತ್ಯಂ !

ಆದೊಡಂ ನಿನ್ನೊಳ್ ನೀ ತಿಳಿಯ !
ಸಂದ ಕಾಲದಾ ಸಮೀಕ್ಷೆ ನಡೆಸಿದೊಡೆ
ಕಾಂಬುದೈ ಅಂಗೈ ನೆಲ್ಲಿಕಾಯಿ !

ಪುಟ್ಟೆನಿಂ ಪೊನ್ನ ಖಡ್ಗದಾಸರೆ
ಮೇಣ್ ನಿನ್ನ ಕೈಗೆ ಸರಸ್ವತಿಯ
ಪ್ರಸಾದಮಿನಿತಿಲ್ಲಂ ಎನೆ ಏನೆಂಬೆ ?

ಸಾಮಾಜಿಕ ಪಿತೃಗಳ ಹೊಣೆಗಿಣೆ
ಏನಿಲ್ಲಮೆಂಬವೊಲ್ ನಿನಗಿತ್ತ
ಉಂಬಳಿ ನಿನಗೆ ಸಲ್ವುದೆಂದಿಗೂ !

ಎಚ್ಚರ ! ಭಗಿನೀ ಮುನ್ನೆಚ್ಚರ !
ಇನ್ನಾದೊಡಂ ಜಗದ ಬೆಳಕುಂಡು
ಸರ್ವಮಾನ್ಯತೆ ಪಡೆಯೆ ಪಿಂಜರಿಯದಿರ್ !

—:o:—

# ವಿದ್ಯಾಧನಂ ಸರ್ವಧನ ಪ್ರಧಾನಂ

ಓವೋ ! ವರ ಬಂಗಾರ ಎನಿಪುದು
ಆವುದು ನೀ ತಿಳಿದು ನೋಡಾ !

ಥಳಥಳಿಪ ಸುವರ್ಣವರ್ಣದ ಲೋಹ ?
ಶ್ರೀ ಸಾಮಾನ್ಯನ ಕಣ್ಗೊಪ್ಪುವ ರನ್ನಹಾರ ?

ಅಲ್ತು,
ನೀಂ ಮನದಿ ಪರಿಭಾವಿಸಿ ತಿಳಿಯು !
ರಸದೃಷ್ಟಿಗೆ ದೂರಮಲ್ಲಮಿದು ಕಾಣ್ !
ಪೆಂಗಳೆಯರ್ ಜಡಮೈಗೆ ಹೇರಿಕೊಳ್ವ
ಚಿನ್ನದೊಡವೆಗಳ ತಳುಕಿನಾಗರ ?
ಉಹೂಂ,
ಎಂದೊಡೆ ಮತ್ತಾವುದು ಪೇಳ್,
ಪ್ರಾಪಂಚಿಕ ಸುಖಭೋಗಗಳೇಂ ?

ಅಲ್ತಲ್ತು,
ವಿದ್ಯಾರ್ಥಿ ಜೀವನಮಲ್ತೆ ಎಲ್ಲಕ್ಕೂ
ಮಿಗಿಲಾದ ಭೃಂಗಾರ–ಬಂಗಾರ ?
ಲೋಕಾಲೋಕದ ವೇದ ಗುರುಗಳ್
ವಿದ್ಯಾಧನಂ ಸರ್ವಧನ ಪ್ರಧಾನಂ
ಎಂದೊರೆದರಲ್ತೆ ಭವ್ಯಭವಿತವ್ಯದ
ಅರಮನೆಯಂ ಕಟ್ಟುವ ಸಂಯೋಜನೆಯಲಿ !

—:o:—

# ಮುಕ್ಕೋಟಿ ಮಕ್ಕಳಿಮ್ಮಡಿ ಬೆಳಸಿ...

ಓ ! ತಾಯೆ, ದಿವ್ಯ ಭಾರತೀ ! ನೀಂ
ಜಗದ್ ವಂದ್ಯೆ ತ್ರಿಲೋಕ ಪೂಜಿತೇ
ಸತ್ಯ ಧರ್ಮ ಸಂಸ್ಕೃತಿ ಶೋಭಿತೇ !

ವೇದ ಸಂಸ್ಕಾರ ಶ್ರೀಮಂತಿನೀ
ಗಂಗ ಯಮುನ ಕೃಷ್ಣೆ ತುಂಗಭದ್ರ
ಪುಣ್ಯತೀರ್ಥ ಪರಿಪಾವನಿ ಜನನೀ !

ನಿನ್ನ ರತ್ನಗರ್ಭಾಂಬುಧಿಯೊಳ್
ಜ್ಞಾನ ವಿಜ್ಞಾನ ಘನ ಪಾಂಡಿತ್ಯ
ವೇದ ಮಹಾ ಸಂಪತ್ತು ತುಂಬಿರಲ್

ಮತ್ತಿದೇಂ ಕಡುಹೀನ ವ್ಯವಹಾರ ?
ಸಹಿಸಲಾಗದ ತೊಡೆಯಲಾಗದ
ಸತ್ಯ ಧರ್ಮ ಶಾಂತಿರಹಿತ ದುಷ್ಕರ್ಮ ?

ಏನಿದೇನಿದು ಅತೀವ ಹೇಸುತನ ?
ಸರಸತೀ ಆಲಯಂ ಬೊಕ್ಕು ವರ
ಪ್ರಸಾದ ಪಡೆಕೊಂಡ ಮಕ್ಕಳಲಿ ?

ನಿನ್ನ ಪೋಷಣೆಯೊಳೆ ನಿನಗೆ ದ್ರೋಹ
ಬಗೆದು ಲಂಚದಲಿ ಅರಮನೆ ಕಟ್ಟಿ ;
ಅಂಗನೆಯರ ಕಾಮನೆಗೆ ಬಲಿಗೊಟ್ಟು ;

ದೀನದಲಿತರ ತುಳಿದು ಕರುಣೆಯಿಲ್ಲದೆ
ರಕ್ತ ಹೀರಿ ವಂಚನೆಗೈದು ಡೊಳ್ಳು
ಬೆಳೆಸುವ ಇವರು ನಿನ್ನ ಮಕ್ಕಳೇ ?

## ಮುಕ್ಕೋಟಿ ಮಕ್ಕಳಿಮ್ಮಡಿ ಬೆಳಸಿ___

ರಾಷ್ಟ್ರಸೇವೆಯ ನೇಮದಿ ರಾಷ್ಟ್ರವನೆ
ಕಬಳಿಸುವ ಹೇಸುಮನದ ಗೋಮುಖ
ವ್ಯಾಘ್ರಗಳಿವರು ನಿನ್ನ ಮಕ್ಕಳೇ ?

ಮುಕ್ಕೋಟಿ ಮಕ್ಕಳಿಮ್ಮಡಿ ಬೆಳಸಿ
ನಿನ್ನ ರನ್ನದೊಡಲಿಗೆ ಕೈಯ್ಯಾರೆ
ಘೋರ ವಿಷವೂಡಿಸಿದೆಯಾ ತಾಯಿ ?

ಹಾ ! ಘೋರ ಘೋರಾತಿಘೋರವಿಾ
ಪೆಣ್ಗೊಲೆ ಧರ್ಮಗೊಲೆಯಂ ನೀ
ಎಂತು ಸೈಪೆ ಹೇಳೆನ್ನ ಮಾತೆಯೆ ?

ಓ, ಭಾರತ ವರ್ಷ ! ಎನಿತು ಪವಿತ್ರ
ನಿನ್ನ ನಾಮ ! ಜಗದೊಳೆಲ್ಲೂ ಇರದ
ನಾಮ !! ಇಂದು ನಿನ್ನ ಮಕ್ಕಳಿಂದಲೇ
ಕಲುಷಗೊಂಡಿತೆ ಹಾಯ್ !

—:o:—

## ಏನುಬೇಕು ?

ಜಗಕೆ ಜಗಜ್ಯೋತಿ
ಸೂರ್ಯ ಬೇಕೇಬೇಕು

ಜೀವನಕೆ ಪರಸ್ಪರ
ಸಹಕಾರ ಬೇಕೇಬೇಕು.

—:o:—



5]

# ಕಬ್ಬ ರಸಾನ್ನ

ಎಳೆನೇಸರ್ ತಳತ್ತಳಿಸಿ
ತೃಣ ಮಂಡಿತ ಇಬ್ಬನಿ
ಬಜ್ಜರದೊಲ್ ತಾ ಜಗಜಗಿಸಿ
ಕಣ್ಮನಗಳ್ ಸಿರಿ ಸೊಬಗಿನ
ರಸದೌತಣದಿಂ ನಲಿನಲಿಯೆ
ಆತ್ಮ ಆಧ್ಯಾತ್ಮ ಪ್ರತ್ಯಯ ಕಾಣೋ !

ಸಸ್ಯ ಶ್ಯಾಮಲ ವನಧಾತ್ರಿ
ವರ ಪಚ್ಚೆಯೊಲ್ ಪಿರಿದಪ್ಪಿ
ಶಾಲಿವನಂಗಳ್ ಮೈತುಂಬಿ
ಪೊನ್ನರಂಗಿಸಿಂ ನಳನಳಿಸಿ
ಆಶ್ವೀಜ ಬನಸಿರಿ ಪೆರ್ಚಿ
ತಾ ರಂಜಿಸಿತ್ತೈ ನವರಾತ್ರಿ ಕಾಣೋ !

ಕಾಜಾಣ ಕಾಮಳ್ಳಿಗಳ್
ಬನದಲಿ ನಲಿನಲಿದುಲಿಯುಲ್
ಕೊರಲಿಂಪಿನ ವರ ಸಂಪದಂ
ವಿರಚಿಸಲ್ ಸಗ್ಗಸಿರಿಯಂ
ಅಃ ಹೃತ್‌ಶುಕ್ತಿಯು ಸುಕೋಮಲ
ದೇಶದೊಳ್ ಕಬ್ಬರಸಾನ್ನ ಕಾಣೋ !

—:o:—

## ಹೇ ಗುರುವೆ

ಸ್ಥಿರವಾಗಲಿ ನಿನ್ನಯ ನೆನಹು
ಎನ್ನಯ ಮನದಲಿ ಹೇ ಗುರುವೆ !

ಇದ್ದಲಿಗೆ ಅಗ್ನಿಯ ಕಿಡಿ ತಾಗಿ
ಧಗಧಗ ಉರಿಯುವ ತೆರದಿಂ
ನಿನ್ನಯ ಉಜ್ವಲ ಓಜೆಯು ತಾಗಿ
ಬೆಳಗಲೆನ್ನ ಚಿದ್ ಋತಾಗ್ನಿಯಂ !

ಬಾಳ್ಗಿಚ್ಚಿನಲಿ ತನುಮನ ಸುಟ್ಟು
ನಲುಗಿದೆನ್ನ ಜೀವಕೆ ನಿನ್ನಯ
ಬಲ್ಮೆಯ ಸವಿ ಸೂಸಲಿ ನಿತ್ಯವು
ಆತ್ಮ ಶಕ್ತಿಯಂ ಉಜ್ವಲಿಸಲ್ ?

ಹಗಲಿರುಳು ಬಿಡದೆನ್ನ ಕಾಯಲಿ
ನಿನ್ನ ಕರುಣ ಪೂರ್ಣ ವರದ ಹಸ್ತ
ದಾರಿ ದೀಪದ ಬೆಳಕು ಬೀರಿ ಕಡು
ಕತ್ತಲೆಯ ಹಾದಿಯಲಿ ಮುನ್ನಡಸೆ !

—:o:—

## ಆತ್ಮ ಸಂತೃಪ್ತಿ

ಅತುಲ ಸಂಪತ್ತಂ ಪಡೆದೊಡೆ
ಏಂಬಹುದು ? ಇಲ್ಲದೊಡೆ
ಆತ್ಮ ಸಂತೃಪ್ತಿ ಜೀವನದೆಡೆ

—:o:—

## ನಂದಕುಮಾರಂ ಚಿನ್ಮಯರೂಪಂ

ನಂದಕುಮಾರಂ ಚಿನ್ಮಯರೂಪಂ
ಅನಘಂ ಅತೀತಂ ಕರುಣಾಕರಂ

ಹಣೆಯಲಿ ಕಸ್ತೂರಿ ತಿಲಕವಿಟ್ಟು
ಕೊರಳಲಿ ಚಿನ್ನದ ಹಾರವಿಟ್ಟು
ಕಾಲಂದುಗೆ ಗೆಜ್ಜೆ ಜಣಿ ಜಣಿರೆನೆ
ಧಿಮಿ ಧಿಮಿ ಕುಣಿಯುತ ನೀ ಬಾರಯ್ಯ !

ನಂದಕುಮಾರಂ ಚಿನ್ಮಯರೂಪಂ
ಅನಘಂ ಅತೀತಂ ಕರುಣಾಕರಂ

ಪಟ್ಟೆ ಪೀತಾಂಬರವನೊಲಿದುಟ್ಟು
ಮತ್ತೆ ಚಿನ್ನದ ಕಿರೀಟವ ತೊಟ್ಟು
ಕೈಯಕೊಳಲನೂದಿ ನಾದವಗೈಯುತ
ಚಿಣ್ಣರರಸನೆ ನೀ ಓಡಿ ಬಾರಯ್ಯ !

ನಂದಕುಮಾರಂ ಚಿನ್ಮಯರೂಪಂ
ಅನಘಂ ಅತೀತಂ ಕರುಣಾಕರಂ

—:೦:—

## ಜೋನ್ ಆಫ್ ಆರ್ಕ್

ಜಗದಿತಿಹಾಸ ಸಂಪುಟದೊಳ್
ಪೆಸರ್ ಎಂದೆಂದಿಗೂ ಉಳಿವವೊಲ್
ಸುವರ್ಣಾಕ್ಷರಗಳಲಿ ಬರೆಸಿದ
ಜೋನ್ ಆಫ್ ಆರ್ಕಳು
ತನ್ನ ಪ್ರಾಣವಂ ತೆತ್ತವೇಳೆಯೊಳ್
ಕೇವಲ ಹದಿಹರೆಯದ ಮುಗುದೆ ಕಾಣೆಲೊ !

—:೦:—

# ಕೃತ್ತಿಕೆಯ ಚಂದ್ರಮ

ಕೃತ್ತಿಕೆಯ ಚಂದ್ರಮನುದಿಸಿ ಧರಾ
ತಳದಿ ಹಾಲ್ನದಿ ಉಕ್ಕಿ ಹರಿವವೋಲ್
ಬೆಳ್ದಿಂಗಳ ಸುಧಾಸ್ರೋತಿ ಹರಿದಿದೆ

ಬಾರಯ್ಯ ದೀನದೀನರ ಬಂಧು
ಸೌಶೀಲ್ಯ ಶಾಂತಿಯಾಮೋದದಿಂ
ಲೋಕ ಕಲ್ಯಾಣದ ನೇಮದಲಿ
ಓ ಶೀತಲ ಶಾಂತಿ ಸಮೀರ !

ಸುವಿಸ್ತೀರ್ಣದಾಣದಲಿ ಶಾಲಿವನ
ಪೈರು ಪಚ್ಚೆ ಮುಂಬೆಳೆದು ತೆನೆಗಳ್
ಭಾರದಿಂ ಅತ್ತಲಿತ್ತ ತೂಗುತಿವೆ

ಹಾಯೊಂದು ಮನತುಂಬಿ ಮೈದುಂಬಿ
ಬಳ್ಕೆಯಿಂ ಮುದ್ದಿಸಿ ಮೃದುಮಧುರ
ಸ್ಪರ್ಶ ಸುಖಮಂ ಪಡೆಯಲ್ಕೆ ಬಾರ್ಕೆ
ಓ ಶೀತಲ ಶಾಂತಿ ಸಮೀರ !

—:o:—

# ಜೀವನ ಸತ್ಯಾರ್ಥ

ನೋಡದೋ, ಮೂಡುತಿದೆ ಮುಂಬೆಳಕು ಮೂಡಣದಿ
ಮಂಜುತೆರೆ ಜಾರುತಿರೆ ನಾಚಿದೊಳ್ ಹಿಮ್ಮೆಟ್ಟಿ.
ಗ್ರಹಕೋಟಿಗಳ್ ನಡೆದಿಪೆ ಸಿಚ್ಚ ಧರ್ಮದಿಂ
ಕರ್ಮದಿಂ ಬ್ರಹ್ಮಾಂಡ ಸೂತ್ರದಲಿ ನೆಲೆನಿಂದು.
ಕಾಲಕಾಲದ ಮುಸಲ ವರ್ಷಧಾರಾ ಜಲದಿ
ಜೀವನೀಯ ತರಂಗಗಳುದಿಸಿವೆ ಬುಗ್ಗೆದ್ದು.
ಕಠೋರ ತಪಃಸಿದ್ಧಿಯ ಯೋಜೆಯೊಳ್ ಸುಂದರ
ವಸುಂಧರೆ ತನ್ನ ಗರ್ಭಾಂಬುಧಿಯಲಿ ನಿನ್ನಂ
ಬೈತಿಟ್ಟು ರಕ್ಷೆಯಂ ನೀಡಿ ಪರಿಪೋಷಿಸಿರೆ
ತಿಳಿಯದೇಂ ನಿನ್ನಾತ್ಮದ ನಿಜ ಮಹಿಮೆಯು ನಿನಗೆ ?
ಯುಗಯುಗಾಂತರಗಳಿಂ ಅಖಿಲ ಬ್ರಹ್ಮಾಂಡವೇ
ನಡೆಯುತಿದೆ ನಿನಗಾಗಿ ! ನಿನ್ನೊಳ್ಳಿತಕ್ಕಾಗಿ !
ಬೆಚ್ಚದಿರು ಬೆದರದಿರು ನೋಯದಿರು ಬೇಯದಿರು
ಏಳು ! ಎದ್ದೇಳು ! ಭುಜತಟ್ಟಿ ಏಳು ಸೋದರಿ !
ಜಡದಿಂದ ಚೈತನ್ಯ ಚಿಮ್ಮಿದುದು ನಿನಗಾಗಿ !
ತ್ರಿಲೋಕಗಳ ಪ್ರಕ್ರಿಯೆ ನಿನಗಾಗಿ ! ತ್ರಿಕಾಲ
ನಿನಗಾಗಿ ! ತ್ರಿಸ್ರೋತಸ್ ನಿನಗಾಗಿ ! ಏಳ್ವೈ
ವೀರವತಿ ! ನಿನ್ನ ಹಿರಿಮೆಯಂ ನೀಂ ಕಂಡುಕೊಳೆ
ಪಿಂಜರಿಯದಿರ್. ಜಣಂ ಹಿಂಚಿದೊಡೆ ಹಿರಿ ನಷ್ಟ.
ನೀನೇ ಪರಬ್ರಹ್ಮ ! ನೀನೆ ಸರ್ವಸ್ವ ! ನೀ ತಿಳಿಯೈ
ನಿನಗಾಗಿ ನಿನ್ನ ಜೀವನೀಯ ಸತ್ಯಾರ್ಥವಂ !

—:o:—

# ನಾಡ ಗುಡಿಯು ನಗಾರಿ

ಬಾರಿಸೈ ನಾಡ ಗುಡಿಯು ನಗಾರಿ
ಬಾರಿಸೈ ಬಾರಿಸೈ ಬಾರಿಸೈ !
ಸತ್ಯ ಧರ್ಮ ಶಿಸ್ತುಗಳ ನೇಮದಲಿ
ಜನ ಪ್ರಗತಿಯ ಭೀಷ್ಮ ಪ್ರತಿಜ್ಞೆಯಲಿ
ನ್ಯಾಯ ನೀತಿ ನಿಷ್ಠೆಯ ಅನುಬಂಧದಲಿ
ಬಾರಿಸೈ ನಾಡ ಗುಡಿಯು ನಗಾರಿ
ಬಾರಿಸೈ ಬಾರಿಸೈ ಬಾರಿಸೈ !
ರನ್ನ ಜನ್ನ ಪಂಪ ಕುಮಾರ ವ್ಯಾಸರ
ಕಾವ್ಯ ಪರಿಮಳಿಸಿದ ಕನ್ನಡ ಕಸ್ತೂರಿ
ನಾಡಿಗೆ ನೀಡಲಿ ಶಕ್ತಿ ಸಾರದ ಧತ್ತೂರಿ !
ಬಾರಿಸೈ ನಾಡ ಗುಡಿಯು ನಗಾರಿ
ಬಾರಿಸೈ ಬಾರಿಸೈ ಬಾರಿಸೈ

—:o:—

# ಕೈ ಹಿಡಿದು ಮುನ್ನಡೆಸು ಶ್ರೀ ಹರಿಯೆ !

ನೀನೇ ಲೋಕಾಲೋಕಕ್ಕೂ
ಸರ್ವ ಸೂತ್ರದಾರಿಯಾಗಿರೆ
ಈ ಸಣ್ಣ ಪಾತ್ರದಾರಿ ಪಂಗೈಯಲಕ್ಕು ?
ಬದುಕಿನಲಿ ಎಲ್ಲಂ ನಿನ್ನಾಣತಿಯೊಲು ನಡೆದಿರೆ
ಎನ್ನಯ ತಪ್ಪೇನಿದೆ ಸ್ವಾಮಿ ?
ಅಂದಿಂದಿಗೂ ಬಗೆಗೆಡಿಸಿ ಕಳೆ ಹಾಕಿದ
ಮಹಾಪಾಪರಾಶಿಯ ಪರಿಧಿಯಂ
ದಾಂಟುವುದು ಸಾಧ್ಯಮೆ ಈ ಜನುಮದೊಳು ?
ಮನಗೆಡಿಸಿದ ನೀನೇ ಇನ್ನಾದೊಡಂ
ಕೈಹಿಡಿದು ಮುನ್ನಡೆಸು ಶ್ರೀಹರಿಯೆ

—:o:—

# ವನಧಾತ್ರಿ

ಸುಂದರ ಸುರಮ್ಯ ಶ್ಯಾಮ ಶಾಲಿನಿ
ಗಿರಿರಾಜ ಪದಪ್ರಾಂತ ವನಧಾತ್ರಿ !

ಗಿಡುಬಳ್ಳಿ ತರುನಿಕರದಿಂ ಮೈದುಂಬಿ
ವರ್ಣವರ್ಣಾಂತ ಸುಂದರ ಸುಮಮಯ !

ಶೃಂಗಾರ ವೈಭವದಿ ಮೆರೆವ ಅರಣ್ಯರಾಣಿ !
ವರ್ಷಾಕಾಲದಿ ಜೋರ್ ಜೋರನೆ ಭೈರವ

ವರ್ಷ ಸುರಿಯೆ ಎಳೆದಳಿರ್ ನಳನಳಿಸಿ
ಶೋಭಿಪೆ ತುಂಬು ಜವ್ವನದೈಸಿರಿಯಲಿ.

ಮಾಗಿಯೊಳ್ ಕಾರ್ತಿಕಂ ಬೆಬ್ಬಳಿಸಿ
ನಿಲಲ್ ನೀಂ ಎಲೆವಿಟ್ಟು ಬಡತನದಿ

ನರಳ್ದು ವಸಂತ ಪ್ರಭುವನೋಲೈಸಿ
ಚಿಗುರೊಡೆದು ಪೂತು ಮೈಸಿಂಗರಿಸಿ

ಜಗವಂದ್ಯಳೆನೆ ಆನಂದಿಸೆ ಹೇ ಬನರಾಣಿ !

—:o:—

ಎಲ್ಲ ಬಲ್ಲೆ ಎಂದು ನಾನು
ಹೇಳಲಾರೆ ಕೇಳು ಚಿನ್ನ ;

ಒಂದು ಮಾತ್ರ ನಾನು ಬಲ್ಲೆ
ನೀನೇ ಎಂದು ಲೋಕವೆಲ್ಲ.

—:o:—

# ತವಕೃಪಾ ಸಂಪತ್ತಿ

ಓಹೋ ! ನೋಡಾ ನಿಡುಬಯಲ ಮಧ್ಯೆ ನೆಲೆನಿಂದ
ತರುಶಿವನಿರವಂ ! ಏಂ ಸೊಗಂ ! ಏಂ ಭವ್ಯತಾ
ಪರಿವೇಶಂ ! ಆಹ, ಕೆಮ್ಮನೆ ಕೆಂಪಳಿರ ಪ್ರಸಿರಿ
ತಳತ್ತಳಿಸಿ ಸುಮಸಿಂಗರವನೇ ಮಾರ್ದುದಲಾ !
ಲೋಕಾಲಯದಿ ದೂರ ಪಥಿಕರ್ ದಣಿದಿರಲ್
ಬಿಸಿಲೊತ್ತಿ ತವತಂಪಿನೆಲೆಗೆ ಬಾರೆಂದು ಕೈ
ವೀಸಿ ವೀಸಿ ಕರೆವವೋಲ್ ಹರೆಗೈಯಾಡುತಿವೆ !

ನೋನೋಡಿ ಮುದವೆತ್ತೆನ್ನ ಮನಃಚಿತ್ತಶ್ರೀ
ಧ್ಯಾನಗಾಯಿತ್ರಿಯನೇರ್ದು ಭೂರ್ಭುವಸ್ಸುಗಳಂ
ದಾಂಟಿ ಸತ್-ಚಿತ್ ವೃತ್ ಮಧುಮತ್ತತೆಯ ಯೋಗ
ನಿದ್ರೆಯಲಿ ಮರೆತಿದೆ ಜಗವುಂ ಪೇಳಲೇನೊಡೆಯ ?
ತವ ದಯಾಪೂರ್ಣ ತಣ್ಣೆಳಲ್ ತಣ್ಣಸಿಯ ಶ್ರೀ
ರಕ್ಷೆಯಿತ್ತುದು ಪಾತ್ರಕಾ ಮಹಚ್ಛಾಯೆಯ ಪೋಲಿ !

ಹೆ, ಸೃಷ್ಟಿ ಶಕ್ತಿಯೆ ಎಲ್ಲಮಿರ್ದೇನಿಲ್ಲದಾ
ನಿಡುವಯಲ್ಗೆ ಘನವೃಕ್ಷ ಶಿವನಂ ನೆಲೆವಿಟ್ಟು
ಯೋಗದ ಜಾಗದ ಜಸ್ತ್ರಯತೆಯನಾರ್ಕೈದು ನಿಚ್ಚ
ಚಿತ್ ಆನಂದಮಂ ನೆರೆ ಸೂಸಿ ಸರ್ವಮಿಪರ್
ಸರ್ವ ಶೂನ್ಯತಾ ಪರಿಪೂರ್ಣದಲಿ ಸರ್ವಲಯ
ಮಾಗಿಸಿದ ತವಕೃಪಾ ಸಂಪತ್ತಿಗೆಣೆಯುಂಟೇ ?

—:o:—

# World War

ಬಸಿ ನೆತ್ತರ್ ಕುದಿಕುದಿವು ಸುಡುಗಾವಿನ ಸೊರ್ಕು
ಉಕ್ಕಿ ರೊಚ್ಚಿನಿಂ ಕಿಚ್ಚಿನಿಂ ಜಡಿಕುಟ್ಟಿ !
ಮುನ್ನುಗ್ಗಿ ಕೋವಿ ಬಾಂಬು ಫಿರಂಗಿ ಮುಂತಪ್ಪ
ಕೂರ ಆಯುಧವನೊಗೆಯಿತೇ ರಣಯುದ್ಧ ?

ಜೀವಕೋಟಿಯು ಅರೆಚಣದೊಳ್ ಬಲಿತೆಗೆದು ರಣ
ಮಾರಿಗೌತಣವಿಕ್ಕಿ ನಿಷ್ಕರುಣೆಯಿಂದಲಿ
ಮಡದಿ ಮಕ್ಕಳ ಅನಾಥರಂಗೈದು ದೇಶಕೆ
ಕುತ್ತೊದವಿಸಿದುದೆ ಚಂಡ ಪ್ರಚಂಡತನಂ ?

ಎಲ್ಲಿ ನೋಡಿವರಲ್ಲಿ ಹೆಣಗಳ ಬಣಂಬೆಯಂ
ಒಟ್ಟಿ ರಕ್ತತರ್ಪಣವಿತ್ತು ಎರ್ದೆಯೊಳ
ಗಿಚ್ಚಂ ತಣಿಸಿ ಗದ್ದೆನೆಂಬ ಹುಮ್ಮಿನಲಿ ಮತಿ
ಬೀಗಿದೊಡೆ ಜಗತ್ ಶಾಂತಿ ಗತಿಯೇಂ ಹೇಳ ?

ಮಹತ್ ಸೂತ್ರದಲಿ ಬ್ರಹ್ಮಾಂಡವಂ ಬಂಧಿಸಿದ
ಪರಬ್ರಹ್ಮ ಯಂತ್ರ ವಿದ್ಯಾಕೋವಿದನೆನೆ
ಮನುಜಮತಿ ಅವನನ್ನೆ ಬೆರಗುಗೊಳಿಸಿರಲಕ್ಕು
ಕಠಿಣ ಯಂತ್ರಸಿದ್ಧಿಯುಲೊಗೆದ ರಣಗಿಚ್ಚು !

ಲೋಕಮೊಳ್ ಪ್ರಸಿದ್ಧಿಯೊಡೆದ World War
ರಾಷ್ಟ್ರರಾಷ್ಟ್ರಗಳಂ ರಣರಂಗಕೆಳೆದಾ
ಘೋರ ಪಾಪಮಂ ಅಳಿಸಲಕ್ಕುಮೆ ಇಂದೆನಿತು
ಪ್ರಯತ್ನಿಸಿದೊಡಂ ಜಗತ್ ಶಾಂತಿಯು ನೇಮದಿ?

—:o:—

# ಕನ್ನಡ

ಕನ್ನಡ ನಾಡಿನ ಕನ್ನಡ ಮಕ್ಕಳೇ
ಕನ್ನಡ ದೇವಿಗೆ ರನ್ನದ ಗುಡಿಕಟ್ಟಿ
ಚೆಂದದಿ ಚೆನ್ನುಡಿ ಸೇವೆಯ ಮಾಡಿ
ಅಂದದಿ ಬಾಳಿನ ಚಿನ್ನರ ಕೂಡಿ
ಕನ್ನಡ ಕನ್ನಡ ಸವಿಗನ್ನಡ ಎಂದು
ಜಯ ಘೋಷವ ಮಾಡಿ !

ಪರಜನ ಪರನುಡಿ ಹೇರಿರೆ ಕುತ್ತು
ನರಳುತಿರೆ ತಾಯ್ನುಡಿ ಬೆನ್ ಹುರಿ ಸತ್ತು
ನಾಡಿನ ಸಂಸ್ಕೃತಿ ನುಡಿಯಲಿ ಬೆಳಗಿ
ಇಂಗ್ಲೀಷ್ ಮೋದ ವ್ಯಾದಿಯ ಜಡಿಕುಟ್ಟಿ
ಕನ್ನಡ ಕನ್ನಡ ಸವಿಗನ್ನಡ ಎಂದು
ಜಯ ಘೋಷವ ಮಾಡಿ !

ನಿಚ್ಚ ಮೋಜಿನ ಮೇಳ ಗುರಿಗೆತ್ತು
ನಾಡು-ನುಡಿ ಸೇವೆಯ ಕೈಬಿಟ್ಟು
ಕೇಡನು ಬಗೆದು ಕೆಡದಿರು ಸೆಲೆಗೆಟ್ಟು
ಮೆಚ್ಚದೆ ನೆಚ್ಚದೆ ಎಲ್ಲಿಯು ಎದೆಗೆಚ್ಚು
ಕನ್ನಡ ಕನ್ನಡ ಸವಿಗನ್ನಡ ಎಂದು
ಜಯ ಘೋಷವ ಮಾಡಿ !

—:o:—

# ಸತ್ಯಮೇವ ಜಯತೇ

ಸತ್ಯಮೇವ ಜಯತೇ ನಾನೃತಂ
ಸತ್ಯೇನ ಪಂಥಾ ವಿತತೊ ದೇವಯಾನಃ ।
ಯೇನ ಕ್ರಮಂತ್ಯೃಷಯೋ ಹ್ಯಾಪ್ತಕಾಮಾ
ಯತ್ರ ತತ್ ಸತ್ಯಸ್ಯ ಪರಮಂ ನಿಧಾನಂ ॥
ಹಗುರಾಗು ಹಗುರಾಗು ಹಗುರಾಗು ಎಲೆ ಜೀವ !
ಕಾಮಕಾಮನೆಗಳ ತೊರೆದು ಆಸೆನಿರಾಸೆಯ
ಕಟ್ಟೆಟ್ಟು, ಐಹಿಕ ಸುಖಭೋಗವ ಪಿಂತಿರ್ಕಿ
ಹಗುರಾಗು ಹಗುರಾಗು ಹಗುರಾಗು ಎಲೆ ಜೀವ !
ಮತಿ ಶಿಖರವನೇರುವೊಡೆ ದೂರಾಲೋಚನೆಯ
ಮಾಡುವೊಡೆ ಮೈಮನ ಹಗುರಿಲ್ಲದಿರೆ ಸಾಧನೆ
ನಿಷ್ಫಲ ಕಣ !
ಸತ್ಯವೇ ತಾಯಿ ಸತ್ಯವೇ ತಂದೆ
ಸತ್ಯವೇ ದ್ರವ್ಯ ಸತ್ಯವೇ ದೇವರದೇವ ಕಣ !
ಸತ್ಯವ್ರತರ್ ಕಷ್ಟಕಾರ್ಪಣ್ಯಗಳಲಿ ತೊಳಲಿ
ಬಳಲಿದೊಡಂ ಕಟ್ಟಕಡೆಗೆ ಜಯವಪ್ಪುದೆಲ್ಲಂ
ಎಂಬರೋ ಜಗದೊಳುಳ್ಳ ಮಹಾನುಭಾವರು.
ಕೇಳ್ ಜೀವ ! ಪಿಂತೆಗೈದ ಸತ್ಕರ್ಮದಿಂದೆ ನರ
ಜನುಮಪೆತ್ತಿ ಬಾಳ್ಮೆಯ ಸಿರಿಮೆಯರಿಯದಿರ್ದೊಡೆ
ಬಹುದೇಂ ನರಸಿರಿ ? ನಿನ್ನೊಳ್ ಜಾನಿಸಿ ನೋಡಾ
ಓ ! ನವಜೀವನಪಟು ! ಕವಿಕಾವ್ಯಸ್ಫೂರ್ತಿ ನಿಚ್ಚ
ಸತ್ಯಾರ್ಥ ಪ್ರಕಾಶನದಿಂದಲ್ತೆ ಮಹತ್ವದಂ ?
ಏಗಳುಂ ಸತ್ಯಪಥಮೆ ಜೀವನೋದ್ಧಾರಕ್ಕೆ
ಪೇಳ್ ಭಾವನೋಜ್ವಲದೈಂದ್ರಜಾಲಕ್ಕೆ
ಸತ್ಯ ಸ್ಪಂದನದ ತಾನ ತಾನ ಸಹಸ್ರ ಸಂತಾನ ಕಣ !
ಸತ್ಯವೆ ನಿತ್ಯ ಪ್ರಕೃತಿ ಪ್ರಾಣಾಯಾಮಂ
ಸತ್ಯವೆ ಲೋಕಾಲೋಕಂಗಳ ಚಕ್ರಾಯಣಂ
ಸತ್ಯವೆ ಮನುಹೃದಯ ಕಾವ್ಯಸ್ಫೂರ್ತಿ ಮಧುರಂ!

—:o:—

# ಧೂಮಕೇತು

ನೀಲಿಯ ಬಾನಿನ ಸುಂದರ ಹಣೆಯಲಿ
ಜಗ ಜಗ ಮಿಂಚುತಿಹ ಉಡುಗಣ ಮಧ್ಯೆ
ತೆಕ್ಕನೆ ಮೂಡಿ ಬಂತೈ ಧೂಮಕೇತು !
ಹಾಹಾ ! ಎಂದೋಲಿತು ಜನತತಿ ಅದ
ನೋಡಿ ! ಭಯಭೀತಿಯಿಂದಲಿ ಜಾತಕ
ಗ್ರಹಬಲವ ಪರಿಕಿಸಿ ನಿಡು ಸುಯ್ದರು ಎಲ್ಲಾ !
ಆರ ಪತನಕೆ ನಾಂದಿಯೋ ಎನೆ ತಾ
ಭೀಮಿಸುತಿದೆ ಅಂಬರದಂಗಣದಲಿ !
ಅಮೃತ ಕುಂಭದಿ ಒಡನೆ ಸಂಭವಿಸಿದ
ಕ್ರೂರ ವಿಷದ್ರವ್ಯವೊ ಎನೆ ಅಚ್ಚರಿ
ತುಂಬಿ ಅದ್ಭುತ ವೈಭವ ಹೋಲಿ !
ಹಾ ! ಆರೂ ನೋಡದಿರಿ ಅದನೆಂದೂ !
ನೋಡಿದರೆ ಕುಲಕೆ ಕೇಡು ! ಏಳೇಳು
ಜನ್ಮಗಳ ಪುಣ್ಯಫಲ ನಾಶಗೊಳ್ಳುವುದು !
ಎಂದರಾ ಪಂಡಿತ ಜನತತಿ !
ಹೇಳಿ ಕೇಳಿ ಅದ ಕಳಂಕವೆಂಬರು
ನೂರು ವಿಧ ಭಯವ ತುಂಬುತಲಿ ಮನಕೆ !
ಹರೆಯುವೀ ಶಾಂತಿಯೀ ನಿಸ್ಪಂದವೀ
ಅಪೂರ್ವವೀ ಮಿಂಚಿನ ಚಿತ್ತಾರವೀ
ಸ್ವರ್ಣಖಚಿತ ಅಂದದೀ ಗ್ರಹ ಬಸಿವುದೇ
ಕೇಡೆಮಗೆ ಹೇಳಾ ! ಬಂದಪುದದುವೆ
ಗ್ರಹತಸದಿ ಸಿಂಗರ ಸಿಂಧುವಾಗಿ ಗಗನಕೆ !
ಗೆಣೆಯಾ ! ಜರಿಯದಿರೆಲೆ ಬಿದರಿ ;
ನೋಡು, ನೀ ಆಪನಿತು ನೋಡು !
ಘಾಸಿ ಪಡುವ ಭಯ ಒದಿಗೊತ್ತಿ ನೋಡು !
ಕಂತುವುದಲ್ಲೆ ಸುಂದರ ಗ್ರಹ ಆರೆತಾಸಿನಲಿ.

—:o:—

# ಭಾ ರ ತೀ

ಸರ್ವಾತ್ಮಿಕೆ ಸರ್ವಾಂಗ ಸುಂದರಿ
ವೇದ ಜನನಿ ಪುಷ್ಪಮಾಲಿನಿ
ಹರಿದ್ರಾ ಕುಂಕುಮ ಶೋಭಿತೇ
ಸನಾತನೀ ಸರ್ವಮಂಗಳೇ
ಕೌಲಿನೀ ಸಕಲ ಜನ ಸೌಖ್ಯಧಾತ್ರೀ
ಕಲಾನಿಧೀ ಧರ್ಮಸ್ವರೂಪಿಣೀ
ಶಾಂತಿಪ್ರಿಯೆ ಮಂತ್ರಶಾಸ್ತ್ರ ಭಾಮಿನಿ
ಮಾನವತೀ ಲಾಂಗೂಲಾಯುಧೇ
ಸಂಗೀತ ಶಾಸ್ತ್ರ ನೃತ್ಯಕಲಾ ರಸಿಕೇ
ತೇಜೋವತೀ ವರತತ್ತ್ವಮಯೀ
ಸರ್ವ ಸತ್ ಸಂಪ್ರದಾಯೇಶ್ವರೀ
ಗುಣವತೀ ಸರ್ವಧರ್ಮವರ್ಧಿನೀ
ಸಕಲ ವಿದ್ಯಾ ಕಾವ್ಯ ಕಾನನ ಕಾಮಿನೀ
ನಮೋ ನಮೋ ಭಾರತ ಜನನೀ
ನಮೋ ನಮೋ ಸಂಸ್ಕಾರ ಸರ್ಪಿಣೀ !

—:o:—

# ನಾರೀ ಜನ

ಚೂರುಪಾರು ರೊಟ್ಟಿಗಾಗಿ
ಬಾಲವಾಡಿಸಿ ವಿಧೇಯತೆಯಿಂ
ಬಾಳುವಾ ನಾಯಿಯಂತೊಲು
ಚೂರುಪಾರಿಗೆ ತನುಮನವೊಡ್ಡಿ
ಪುರುಷ ಸಂಗಾತಿಯಾದೊಡಂ
ಎಂದೆಂದಿಗೂ ನಾರೀ ಜನರ್
ಈ ನೆಲದೊಳ್ ದಾಸಿಯೆ ನೋಡಾ !

—:o:—

# ಹಿನ್ನಡೆ

ಓ, ಇಂತಪ್ಪ ಹಿನ್ನಡೆಯೇಕೆ ಎಮ್ಮೊಳ್
ರಾಷ್ಟ್ರ ಸ್ವಾತಂತ್ರ್ಯ ಕೈಸಂದು ಎನಿತು
ದಶಕಂಗಳು ಉರುಳ್ದುವು ಪೇಳಿಲೊ ?

ಆದೊಡಿನ್ನೇಕೆ ತೊಲಗಲಿಲ್ಲವೈ
ಜಡ ಜೀವನೀಯ ದಟ್ಟ ದಾರಿದ್ರ್ಯ
ವೇಣಜ್ಞಾನ ಸಂಕಟ ಸಂಪದಂ ?

ಮುಕ್ಕೋಟಿ ಜನ ಜಾಪತ್ತು
ಕ್ರಿಮಿಕೀಟಗಳೋಪಾದಿಯಲಿ
ಪುಟ್ಟಿ ಮುಲುಮುಲಿವುದ ನೋಡ !

ಹೆಣ್ಣೀಸು ಮಕ್ಕಳೀಸು ಮುದಿ
ಹಂದರಗಳೀಸು ಎಂದುಮೆಂದು
ವಿಂಗಡಿಸಿದೊಡೆ ಉಳಿವುದ ನೀ ತಿಳಿಯ !

ಹೆಣ್ಣಿಗಿಲ್ಲ ಆರ್ಥಿಕ-ವೈಯ್ಯಕ್ತಿಕ-
ಅಧಿಕಾರ ಸ್ವಾತಂತ್ರ್ಯ ಎನುವೊಡೆ
ಅರ್ಧ ಸಿರಿಸಂಪದ ಹಾಳಾಯ್ತು ಕಣ !

ಕಳೆದುಳಿದ ನಿಡು ಸಂಖ್ಯೆಯಲಿ
ಟೊಳ್ಳುಗಟ್ಟಿಗಳ ತೂಗಿ ನೋಡೆ
ತಿಳಿವುದೈ ಜೀವನೀಯ ಮಹಾ ಸೌಭಾಗ್ಯ !

ಹಿ ನ್ನ ಡೆ

ಟೊಳ್ಳೆಂದು ಇನಿತು ಅಸಡ್ಡೆಗೈಯದೆ
ಹತ್ತೂತ್ತ ಕೈಗಳಂ ಪರಿಪುಷ್ಟಿಗೊಳಿಸೆ
ಪುಟಿಪುಟಿವುದೊ ಸಂಜೀವನ ಕ್ರಾಂತಿ !

ಮೂಢಮತಿಯು ಕತ್ತಲೆ ಕಳೆದು
ಹಳೆ ಭಾಳಿಗೆ ಹೊಸ ಬೆಳಕು ತುಂಬಿ
ಎಳೆಯಿರೊ ರಾಷ್ಟ್ರರಥವ ರಾಜಪಥದಲಿ !

—:o:—

## ಮಂಗಳಾ ಶುಭ ಮಂಗಳಾ

ಓವ್ರೋ ಪೂರ್ವ ದಿಗಂತದಿ ಅರಳಿತು
ಎಳೆ ರವಿಯು ಸಿರಿ ಮುಗುಳು ಮಂಗಳಾ
ಶುಭ ಮಂಗಳಾ

ಸಾರಿತು ಹೊಸ ದಿನ ಶ್ರಮದ ಸುಗ್ಗಿಗೆ
ನಿಜಜೀವನ ಸಂಕ್ರಾಂತಿಗೆ ದಿವ್ಯ
ಜ್ಞಾನದ ರಸಸ್ವಾದನೆಗೆ ಮಂಗಳಾ
ಶುಭ ಮಂಗಳಾ

ಹೊತ್ತೇರಿತು ಇನ್ನು ಮಲಗಲೇನು
ಚೆಂದ ಏಳಯ್ಯ ಜೀವನ ಬಂಧು
ಮಮ ಅನುರಾಗ ಸಿಂಧು ಮಂಗಳಾ
ಶುಭ ಮಂಗಳಾ

—:o:—

# ಮಲ್ಲಿಕಾ ಕೃತಿಗಳು

| | | | |
|---|---|---|---|
| ೧. | ಜೀವನ ಗಂಗಾ* | (ಕಾದಂಬರಿ) | ೧೦-೦೦ |
| ೨. | ಡಾ|| ಅಘೋರ* | ” | ೧೨-೦೦ |
| ೩. | ಡಾ|| ಕಮಲೇಶ್* | ” | ೧೫-೦೦ |
| ೪. | ವಂದೇ ಮಾತರಂ* | ” | ೧೫-೦೦ |
| ೫. | ಅನಂತಾನಂತದೆಡೆಗೆ* | ” | ೮-೦೦ |
| ೬. | ಆಸೆಯ ಸುಳಿಯಲ್ಲಿ | ” | ೨೦-೦೦ |
| ೭. | ಮನೋನ್ಮಣಿ | ” | ೨೦-೦೦ |
| ೮. | ಸಂತ್ರಾಸಿಣಿ | | ೨೫-೦೦ |
| ೯. | ರತ್ನಗರ್ಭಾವಸುಂಧರಾ* | (ಕಥಾಸಂಕಲನ) | ೬-೦೦ |
| ೧೦. | ಬಹುರತ್ನಾವಸುಂಧರಾ* | ” | ೬-೦೦ |
| ೧೧. | ಲಿಯೋನಾ* | ” | ೬೦೦೦ |
| ೧೨. | ಶ್ರೀಮುಖಿ* | ” | ೬-೦೦ |
| ೧೩. | ವೈಶಾಖೀಪರ್ವ* | ” | ೮-೦೦ |
| ೧೪. | ಫಾಲ್ಗುಣೀ ಪರ್ವ* | ” | ೮-೦೦ |
| ೧೫. | ಶ್ರೀಹರ್ಷಲಾ | ” | ೧೫-೦೦ |
| ೧೬. | ರಮಣೀಮಣಿ | ” | ೧೫-೦೦ |
| ೧೭. | ಐಂದ್ರ ಕೀರ್ತಿ ಕೇತನಂ | ” | ೩೦-೦೦ |
| ೧೮. | ಉತ್ತರೋತ್ತರಣಿ | ” | ೧೫-೦೦ |
| ೧೯. | ರಾಗಾನುರಾಗಿಣಿ | ” | ೧೫-೦೦ |
| ೨೦. | ಪೂಜಾವಸಾನ ಸಮಯೇ _ !* | (ಕವಿತಾ ಸಂಕಲನ) | ೧೦-೦೦ |
| ೨೧. | ಧ್ಯಾನಾವಸಾನ ಸಮಯೇ.....!* | ” | ೧೦-೦೦ |
| ೨೨. | ಗಾನ ತೀರ್ಥ | ” | ೧೦-೦೦ |
| ೨೩. | ನಾದ ಬಿಂದು* | ” | ೧೦-೦೦ |
| ೨೪. | ಗಗನ ಕುಸುಮ | ” | ೧೦.೦೦ |

(ರಕ್ಷಾಪುಟ ೪ ರಲ್ಲಿ ಮುಂದುವರಿದಿದೆ)

---

* ಇವುಗಳ ಪ್ರತಿಗಳು ಮುಗಿದಿವೆ.

# ಮಲ್ಲಿಕಾ ಕೃತಿಗಳು

(ರಕ್ಷಾಪುಟ ೩ ರಿಂದ ಮುಂದುವರಿದಿದೆ)

| | | | |
|---|---|---|---|
| ೨೫. | ವಿಜಯ ಗಾಥಾ | (ದೇಶಭಕ್ತಿ ಗೀತೆ) | ೩-೦೦ |
| ೨೬. | ಪುಣ್ಯಪಯೋನಿಧಿ* | (ನಾಟಕ) | ೬-೦೦ |
| ೨೭. | ಪುಣ್ಯಾಭಿಸಾರ* | " | ೬-೦೦ |
| ೨೮. | ತರಂಗಿಣಿ | (ಸಾನೆಟ್ಟುಗಳು) | ೬-೦೦ |
| ೨೯. | ಕೃತಂ ಸ್ಮರಂ ಕ್ರತುಂ ಸ್ಮರ | (ಉಪನಿಷತ್ಕಥಾ) | ೨೦-೦೦ |
| ೩೦. | ಜೀವನ ಕುಸುಮ | " | ೧೦ ೦೦ |
| ೩೧. | ಬೆಳದಿಂಗಳ ರಾತ್ರಿ | (ಶಿಶು ಸಾಹಿತ್ಯ) | ೫-೦೦ |
| ೩೨. | ದೂರ ದೇಶದಲ್ಲಿ | " | ೫-೦೦ |
| ೩೩. | ವಿಶೇಷ ಸುದ್ದಿ | " | ೫-೦೦ |
| ೩೪. | ರಂಗನ ಸಾಹಸ | " | ೫-೦೦ |

* ಇವುಗಳ ಪ್ರತಿಗಳು ಮುಗಿದಿವೆ.

ಲಕ್ಷ್ಮೀ ಪ್ರಕಾಶನ

೭, ಲ್ಯಾಂಗ್ ಫೋರ್ಡ್ ರೋಡ್, ಬೆಂಗಳೂರು–೫೬೦ ೦೨೫